ಅಂಬಿಕಾತನಯದತ್ತರ

# ಹೃದಯ ಸಮುದ್ರ



ಸಂಪಾದಕರು:

ಡಾ|| ವಾಮನ ಬೇಂದ್ರೆ

ಅಂಬಿಕಾತನಯದತ್ತರ ಕಾವ್ಯ

(ವರಕವಿ ಡಾ|| ದ. ರಾ. ಬೇಂದ್ರೆ)

# ಹೃದಯ ಸಮುದ್ರ

''ಅರಳು ಮರಳು'' - ಪಂಚಗುಚ್ಛದಲ್ಲಿಯ ಕವನ ಸಂಕಲನ

ಸಂಪಾದಕರು :

ಡಾ|| ವಾಮನ ಬೇಂದ್ರೆ

ಸಹ-ನಿರ್ದೇಶಕರು,

ಬೇಂದ್ರೆ ಸಂಶೋಧನ ಸಂಸ್ಥೆ



ಪ್ರಕಾಶಕರು :

ಡಾ|| ಕೆ. ಎಸ್. ಶರ್ಮಾ,

ನಿರ್ದೇಶಕರು, ಬೇಂದ್ರೆ ಸಂಶೋಧನ ಸಂಸ್ಥೆ

ಶ್ರೀಮಾತಾ ಪ್ರಕಾಶನ,

ಅಂಬಿಕಾತನಯದತ್ತ ವೇದಿಕೆ

''ವಿಶ್ವಶ್ರಮ ಚೇತನ'', ಗೋಕುಲ ರಸ್ತೆ ಹುಬ್ಬಳ್ಳಿ - ೫೮೦ ೦೩೦.

ಕರ್ನಾಟಕ ರಾಜ್ಯ

ಹೃದಯ ಸಮುದ್ರ (ಕವನ ಸಂಕಲನ)
★
ಕವಿ : 'ಅಂಬಿಕಾತನಯದತ್ತ' (ವರಕವಿ ಡಾ|| ದ. ರಾ. ಬೇಂದ್ರೆ)
★
ಸಂಪಾದಕರು : ಡಾ|| ವಾಮನ ಬೇಂದ್ರೆ,
ಸಹ ನಿರ್ದೇಶಕರು, ಬೇಂದ್ರೆ ಸಂಶೋಧನ ಸಂಸ್ಥೆ ಹುಬ್ಬಳ್ಳಿ
★
ಪ್ರಕಾಶಕರು :
ಡಾ|| ಕೆ. ಎಸ್. ಶರ್ಮಾ, ನಿರ್ದೇಶಕರು, ಬೇಂದ್ರೆ ಸಂಶೋಧನ ಸಂಸ್ಥೆ ಹುಬ್ಬಳ್ಳಿ
ಶ್ರೀಮಾತಾ ಪ್ರಕಾಶನ,
ಅಂಬಿಕಾತನಯದತ್ತ ವೇದಿಕೆ, 'ವಿಶ್ವಶ್ರಮ ಚೇತನ', ಗೋಕುಲ ರಸ್ತೆ ಹುಬ್ಬಳ್ಳಿ - 580 030.
★

★
ಬೆಲೆ : ರೂ.60-00
★
ಮುದ್ರಣ : 18-5-2007
★
ಆಕಾರ : 1/8 ಡೆಮ್ಮಿ
★
ಕಲೆ : ಶ್ರೀ ಸುರೇಶ ಕುಲಕರ್ಣಿ, ಧಾರವಾಡ
★
ಹೊರಚೊದಿಕೆ ವಿನ್ಯಾಸ : ಶ್ರೀ ರವೀಂದ್ರ ಶಿರೋಳಕರ, ಧಾರವಾಡ
★
ಪುಟ ವಿನ್ಯಾಸ/ಡಿಟಿಪಿ : ಶ್ರೀ ಈರಣ್ಣ ನೂಲ್ವಿ, ಡಾ|| ಕೆ. ಎಸ್. ಶರ್ಮಾ ಐ.ಟಿ.ಸಿ., ಹುಬ್ಬಳ್ಳಿ
★
ಮುದ್ರಕರು :
ಶರ್ಮಾ ಮುದ್ರಕರು,
4, ಪತ್ರಕರ್ತರ ಕಾಲನಿ, ಹುಬ್ಬಳ್ಳಿ - 580 032.
★
ಕೃತಿಗಳಿಗಾಗಿ ಬರೆಯಿರಿ :
ಶ್ರೀಮಾತಾ ಪ್ರಕಾಶನ,
'ವಿಶ್ವಶ್ರಮ ಚೇತನ', ಗೋಕುಲ ರಸ್ತೆ ಹುಬ್ಬಳ್ಳಿ - 580 030. ದೂರವಾಣಿ : (0836) 2330466.

ರವೀಂದ್ರ ಪುಸ್ತಕಾಲಯ,
ಚಾಮರಾಜಪೇಟೆ, ಸಾಗರ - 577 401, ಶಿವಮೊಗ್ಗ ಜಿಲ್ಲೆ ದೂರವಾಣಿ : 08183-228616 (ಕ).

# ಸಾವಿರದ ನಮನ

ಹೃದಯಾಂತರಾಳದಿಂದ ಅರಳಿದ ಕವನ ಕುಸುಮಗಳನ್ನು

ಕನ್ನಡ ಸರಸ್ವತಿಗೆ ಅರ್ಪಿಸುವ ಮೂಲಕ,

ಆರದ ಆರತಿಯನ್ನು ಸದಾಕಾಲ ಬೆಳಗುತ್ತ

ವಿಶ್ವಮಾನವ ವಿಕಾಸಕ್ಕೆ ನವಬೆಳಗನ್ನು ಬಿಂಬಿಸುತ್ತಾ ಸಾಗಿರುವ

ಬೆಳಕಿನ ಮಹಾಪಥಿಕ, ಋಷಿಕವಿ, ವಿಶ್ವಕವಿ, ಅಮರಕವಿ

ಔದುಂಬರದತ್ತ ಚೈತನ್ಯ ಕ್ಕೆ

(ದ. ರಾ. ಬೇಂದ್ರೆ-ಅಂಬಿಕಾತನಯದತ್ತ)

ನಮ್ಮ ಸಾವಿರದ ನಮನಗಳು.

ವಾಮನ
(ಸಂಪಾದಕ)

ಕುವಲಯಶ್ಯಾಮ
(ಪ್ರಕಾಶಕ)

# ಪರಿವಿಡಿ

ಮೊದಲನೆಯ ಆವೃತ್ತಿ : ೩೧-೧-೧೯೫೬ - ದ. ರಾ. ಬೇಂದ್ರೆ ೬೦ನೆಯ ಜನ್ಮದಿನದಂದು

# ಮುನ್ನುಡಿ

ಕಳೆದ ಹನ್ನೆರಡು ವರ್ಷಗಳಿಂದ ಬಂದ ಬೆಳೆಯ ಎರಡನೆಯ ಸಿವುಡು ಇದು - 'ಹೃದಯ ಸಮುದ್ರ'ದ ಕವನ ಸಂಗ್ರಹ. ಇವುಗಳಲ್ಲಿ ಹಲವು ಪಾಂಡಿಚೇರಿಗೆ ಹೋಗುವಾಗ, ಅಲ್ಲಿರುವಾಗ, ಅಲ್ಲಿಂದ ಮರಳಿ ಬರುವಾಗ, ಅದರ ನೆನಪು ಆದಾದಾಗ ಬರೆದವುಗಳು. ಪ್ರಾರ್ಥನಾರೂಪವಾಗಿವೆ ಕೆಲವು; ಕೆಲವು ಅನುಭವವರ್ಣನಾರೂಪ; ಕೆಲವು ಅನುಭವ ಸಹಜನಿತವಾದವುಗಳು: ಕೆಲವು ಕಾಣ್ಕೆ, ಕೆಲವು ಕಣಸು-ಕನಸು, ಕೆಲವು ಧ್ವನಿಸುವ ಅನುಭಾವವು ವಾಚ್ಯ-ಅನಿರ್ವಾಚ್ಯದ ನಡು-ಸೀಮೆಗೆ ಸೇರಿದುದು. ಕನ್ನಡ ನುಡಿಗೆ ಅಸಂಭಾವ್ಯವಾಗಿ ತೋರುವುದು ಇದರಲ್ಲಿ ಯಾವುದೂ ಇಲ್ಲ-ಎಂದು ನನಗೆ ತೋರುವುದು.

ಕವಿಜೀವನದಲ್ಲಿ ವಸ್ತುನಿಷ್ಠೆ ಆತ್ಮನಿಷ್ಠೆಗಳು ಹೃದಯನಿಷ್ಠೆಯಲ್ಲಿ ಒಗೆತನದ ಬಾಳ ನಡೆಸುವವು. ಕಾವ್ಯಾಸ್ವಾದನಕ್ಕೆ ಹೃದಯಾನುಭೂತಿ ಮೂಲಧನ. ಆದರ ಕ್ಷೇತ್ರದ ಹಿಗ್ಗು ಜೀವನದ ಸಾರ. ಹೃದಯದ ನೂರು ಸಾವಿರ ತಂತಿಗಳಲ್ಲಿ ಒಂದಾದರೂ ಇಲ್ಲಿಯ ವಚೋವಿನ್ಯಾಸದಿಂದ, ಛಂದೋವಿಲಾಸದಿಂದ, ಧ್ವನಿಯ ತಾಂಡವಲಾಸ್ಯಗಳಿಂದ ಕಂಪಿತವಾದರೆ, ಅನುಕಂಪಿತವಾದರೆ ಇಲ್ಲಿಯ ವಾಣಿ ಸಾರ್ಥಕ. ಸ್ವಾನುಭೂತಿ ಮತ್ತು ಸಹಾನುಭೂತಿಗಳ ಸಂಪರ್ಕವ್ಯಾಪಾರದಲ್ಲಿ ಬರುವ ಪರಿಣತಿಯೇ ಇಲ್ಲಿಯ ಲಾಭ. ಅತಿವಾಸ್ತವತೆಯ ಸ್ಥೂಲ ದೃಶ್ಯಗಳಲ್ಲಿಯೇ ರಮಿಸುವ ಅಭ್ಯಾಸ ಬೆಳೆಸಿಕೊಂಡವರಿಗೆ, ಇಲ್ಲಿಯ ಗಾಳಿ-ಬಯಲಾಟದೊಳಗಿನ ಅಂತರ್ಲಾಗ, ಜಂತರ್ಲಾಗಗಳಲ್ಲಿ ಕಲ್ಪನಾಚಮತ್ಕೃತಿಯಾಗಲಿ, ಆದರದೆ ವಿಕೃತಿಯಾಗಲಿ ಕಂಡರೂ ಅದೂ ನವೀನ ಬೋಧವೇ ಸರಿ. ಉಳಿದ ಮಾತು ಭಾವ-ಸಂದರ್ಭ-ಸೂಚಿಯಲ್ಲಿವೆ.

ಈ ಸಂಗ್ರಹ ಗೆ। ಡಾ. ಮುಗಳಿ ರಂಗನಾಥರಾಯರ ಕಾವ್ಯಮಾಲೆಯ ಪ್ರಕಾಶನದಲ್ಲಿ ಬರುವದಿತ್ತು. ಬೇರೊಂದು ಸೌಕರ್ಯಕ್ಕಾಗಿ ಶ್ರೀ ಭಾಲಚಂದ್ರ ಘಾಣೇಕರ ಅವರೇ ಇದನ್ನು ಪ್ರಕಟಿಸುತ್ತಿದ್ದಾರೆ.

'ಹೃದಯ ಸಮುದ್ರ' ಹಿಂದೆಯೇ ಪ್ರಕಟವಾಗಬೇಕಾಗಿತ್ತು, ಆದರೇನು? ''ಬರುವದೇನುಂಟೊಮ್ಮೆ ಬರುವ ಕಾಲಕೆ ಬಹುದು''- ಈಗ ಬಂದಿತು. ಅದು ಶ್ರೀ ಗುರುಪ್ರಸಾದವೇ!

೩೧-೧-೧೯೫೬
ಧಾರವಾಡ

- ದ. ರಾ. ಬೇಂದ್ರೆ

# ಸಂಪಾದಕರ ಭೂಮಿಕೆ

''ಔದುಂಬರಗಾಥೆ'' ಬೇಂದ್ರೆಯವರ ಜೀವನ ಮಹಾಕಾವ್ಯ. ಇದರ ಪ್ರಾರಂಭ - ೩೧-೧-೧೮೯೬ ಮತ್ತು ಮುಕ್ತಾಯ ೨೬-೧೦-೧೯೮೧. ಇವೇ ಬೇಂದ್ರೆಯವರ ಜನನ ಹಾಗೂ ನಿರ್ವಾಣದ ದಿನಾಂಕಗಳು. ೧೯೧೪ ರಿಂದ ೧೯೪೪ ರ ವರೆಗಿನ ಜೀವನದ್ರವ್ಯವು 'ಹೃದಯ ಸಮುದ್ರ' ಕವನ ಸಂಕಲನದ ಹಿನ್ನೆಲೆ. ಬೇಂದ್ರೆಯವರಿಗೆ ಜ್ಞಾನಸಾಧನೆಯೆ ಬಾಹ್ಯಜೀವನ ಹಾಗೂ ಅಧ್ಯಾತ್ಮಸಾಧನೆಯೆ ಅಂತರಂಗದ ಜೀವನ. ಅಧ್ಯಾತ್ಮವನ್ನು ವೈಜ್ಞಾನಿಕವಾಗಿ ಅಭ್ಯಸಿಸಿ, ವಿಶ್ಲೇಷಿಸಿ, ನಿರ್ಣಯಕ್ಕೆ ಬಂದವರು ಬೇಂದ್ರೆ. ಅಧ್ಯಾತ್ಮ ಎಂಬುದು ದಿನನಿತ್ಯದ ಜೀವನಕ್ಕೆ ದೂರಲ್ಲ. ಅದು ಪ್ರತಿಯೊಬ್ಬರ ಉಸಿರಾಟ. ಶ್ರೀ ಅರವಿಂದವಾಣಿ-ಆರ್ಯ ಪತ್ರಿಕೆ-ಬೇಂದ್ರೆಯವರ ಕೈಗೆ ಲಭಿಸಿದ್ದು-ಪುಣೆಯಲ್ಲಿ-೧೯೧೪ರಲ್ಲಿ. ಅದರಲ್ಲಿ ಶ್ರೀ ಅರವಿಂದರು ಭಾರತೀಯ ವೇದ ಉಪನಿಷತ್ತುಗಳನ್ನೆಲ್ಲ ವಿವಕ್ಷಿಸುತ್ತಿದ್ದರು. ಅವರು ಮಾನವಜೀವನವನ್ನು ಅರ್ಥೈಸಿಕೊಳ್ಳುವ ಬಗೆ ಆಪ್ಯಾಯನವಾಗಿತ್ತು. ಇದು ಭಾರತೀಯ ಸನಾತನ ಧರ್ಮವನ್ನು ಪ್ರಶ್ನಿಸುತ್ತ, ನವ ಅಧ್ಯಾತ್ಮ ಮಾರ್ಗವನ್ನು ರೂಪಿಸುತ್ತಿತ್ತು. 'ನುಡಿ, ಉಸಿರೂ, ಕಣ್ ಕಿವಿಯೂ ಒಳಹೊಂದಿಕೆ'ಯಾಗಬೇಕು. ಇದ್ರೇಂದ್ರಿಯ ಬಲಗೊಳ್ಳಬೇಕು. ನಾನು-ಆತನು=ಆತ್ಮನು; ನೀನು-ಆತನು; ತಾನ್ ತನ್ನನ್ನು ನೋಡಬೇಕು. ಆತನ ಆಕೆ=ಶಕ್ತಿ ತನುಧಾರಿಯಾಗಿ ಒಲಿಯಬೇಕು. ಉಪನಿಷತ್ ಇದು ಬ್ರಹ್ಮ. ಅದು, ಇದು, ಉದು ಎಂಬುದನ್ನೆಲ್ಲಾ ತಿಳಿದುಕೊಳ್ಳಬೇಕು ('ಆಪ್ಯಾಯನ' ಕವನ). ಇದು ಆದಾಗ, ಸಮ್ಯಕ್-ಸ್ಥಿತಿ, ಸಮ್ಯಕ್-ಗತಿ ಮತ್ತು ಸಮ್ಯಕ್ ಬ್ರಹ್ಮಾಂಡದ ಅರ್ಥವಾದೀತು ಎಂಬುದರಲ್ಲಿ ತರುಣ ಬೇಂದ್ರೆಯವರ ನಂಬಿಗೆ, ಶ್ರದ್ಧೆ ಬೇರುಹಿಡಿಯತೊಡಗಿತು. ಇಲ್ಲಿ-

ಅ) ಅದು = ದೇಹದ ಹೊರಗೆ ಕಣ್ಣಿಗೆ ಕಾಣುವ ಭೌತಿಕ ಸಮುದ್ರ.

ಆ) ಇದು = ಪ್ರತಿಯೊಬ್ಬರ ಸಾಮಾನ್ಯ ಜೀವನ.

ಇ) ಉದು = ದೇಹದ ಒಳಗಿರುವ ಅಂತರಂಗದ ಸಾಧಕಜೀವನ ಎಂಬ ಹೃದಯಸಮುದ್ರ!

ಶ್ರೀ ಮಾತಾ, ಶ್ರೀ ಅರವಿಂದರು ಬೇಂದ್ರೆಯವರಿಗೆ ಗುರು ಆಗಿಬಿಟ್ಟರು.

''ಗುರು ಶಿಷ್ಯ ಸಂವಾದದೊಳಿದೆ ಜೀವನ ಧರ್ಮಾ
ಬ್ರಹ್ಮಭಾವ ನಿರತವಿರಲಿ ನಿಜ ಜೀವನ ಕರ್ಮ''

- ಆಪ್ಯಾಯನ

ಎಂಬುದು ಬೇಂದ್ರೆ ಜೀವನದ ನಿತ್ಯದ ಪ್ರಾರ್ಥನೆ ಆಯಿತು. ಇದು ಆಗಲು ಪ್ರಮುಖ ಕಾರಣ ಹೀಗಿದೆ-

ಶ್ರೀ ಅರವಿಂದರು ಜನಿಸಿದ್ದು - ೧೫-೮-೧೮೭೨, ಆಗಸ್ಟ ತಿಂಗಳ. ಇದು ಭಾರತೀಯರ ಪ್ರಕಾರ-ಶ್ರಾವಣ. ಶ್ರೀಮಾತೆಯವರು ಜನಿಸಿದ್ದು - ೨೧-೨-೧೮೭೮, ಫೆಬ್ರವರಿ ತಿಂಗಳ. ಇದು ಭಾರತೀಯರ ಪ್ರಕಾರ - ಮಾಘ. ಬೇಂದ್ರೆಯವರು ಜನಿಸದ್ದು - ೩೧-೧-೧೮೯೬ ಮಾಘವದ್ಯ ಪ್ರತಿಪದೆ! ಜನೆವರಿ ೩೧ ರಿಂದ ಮಾರ್ಚ ಪ್ರಾರಂಭದ ವರೆಗೆ ಮಾಘವದ್ಯ ಪ್ರತಿಪದೆ ಹೊಯ್ದಾಡುತ್ತದೆ. ಶ್ರಾವಣ, ಬೇಂದ್ರೆ ಕಾವ್ಯಜೀವನ ಸಂಬಂಧಿ! ಹೀಗಾಗಿ ಬೇಂದ್ರೆಯವರು-

ಅ) ಮಘಾ ಶ್ರಾವಣಗಳ ಸಾತ್ವಿಕ ಕಂದ ಆಗಿಬಿಟ್ಟರು.

ಬ) "ಶ್ರೀ ಅರವಿಂದರ ದತ್ತೂ ನಾ" ಎಂದು ಹೇಳಿಕೊಳ್ಳುವಲ್ಲಿ ಅಭಿಮಾನಿಯಾದರು.

೧೯೪೪ ರಿಂದ ೧೯೫೦, ಬೇಂದ್ರೆ ಸಾಧಕಜೀವನದಲ್ಲಿ ಕಾಳರಾತ್ರಿ! ಹಿರಿಯ ಮತ್ತು ಕಿರಿಯ ಮಕ್ಕಳ ಮರಣ - ೧೯೪೪. ೧೯೫೦ರಲ್ಲಿ ಪತ್ನಿಗೆ ಅಕಾಲ ಮರಣ ಸಂಭವಿಸುವ ಪ್ರಸಂಗ. ಈ ಗಂಡಾಂತರಗಳಿಂದ ಬೇಂದ್ರೆ ಜೀವನನೌಕೆ ಮುಳುಗುವಂತಾಗಿತ್ತು. ಗುರು ಕೃಪೆ ಕಾಪಾಡಿತು. ಇದರ ಫಲವಾಗಿ ಬೇಂದ್ರೆ ತಮ್ಮ ಅಂತರಂಗದೊಳಗಿನ 'ಹೃದಯ ಸಮುದ್ರ'ದ ಅನ್ವೇಷಕರಾದರು.

"ಅರವಿಂದವಾಣಿ - 'ಆರ್ಯ'ರ ಕಾಣಿಕೆ
ಅದರ ಶ್ರುತಿಯನ್ನೆ ನೀ ಎತ್ತೆಂದಿತು"

ಎಂಬುದಾಗಿ ಬೇಂದ್ರೆ ೧೯೭೩ರಲ್ಲಿ - 'ಮತ್ತೆ ಶ್ರಾವಣಾ ಬಂತು' ಕವನ ಸಂಗ್ರಹದ ಬಾಲ್ಯಕಾಂಡದಲ್ಲಿ ಅಭಿವ್ಯಕ್ತಪಡಿಸಿದ್ದಾರೆ - ಸಿಂಹಾವಲೋಕನ ಕ್ರಮದಲ್ಲಿ.

ಬೇಂದ್ರೆ ಕಾವ್ಯಜೀವನದಲ್ಲಿ 'ಹೃದಯ ಸಮುದ್ರ' ಹನ್ನೆರಡನೆಯ ಕವನ ಸಂಗ್ರಹ. ಇದು ಅವರ ವ್ಯಾವಹಾರಿಕ ಜೀವನ ಮತ್ತು ಆಂತರಿಕ ದಿವ್ಯಜೀವನಾನುಭವದ ಸಿಂಹಾವಲೋಕನವೆ ಆಗಿದೆ. ೧+೨+೩+೪+೫+೬+೭+೮+೯+೧೦+೧೧+೧೨=೭೮. ೭=ಸ ; ೮=ಹ. ಸಹ=೭೮. ಗುರು ಮತ್ತು ಶಿಷ್ಯ ಸಹಜೀವನ ಕಥನ - 'ಹೃದಯ ಸಮುದ್ರ' ಕವನ ಸಂಗ್ರಹದ ಮೂಲ ಸೆಲೆ. ಇದರಲ್ಲಿ ಅರವತ್ತು ಕವನಗಳಿವೆ. ಇವುಗಳನ್ನು-

೧) ಗುರು ಶಕ್ತಿಗೆ - ನಮನ

೨) ಕವಿ ಶಕ್ತಿಯ - ದರ್ಶನ

೩) ಗೆಳೆಯ ಸೂತ್ರದ - ಗೆಳೆತನದ ವಿಕಾಸ

೪) ಭವಗದ್ ದೃಷ್ಟಿಯ - ವಿನ್ಯಾಸ

೫) ಇಹಲೋಕದ ಭವ್ಯ ಜೀವನದಲ್ಲಿ ದಿವ್ಯ ಜೀವನದ ಅನುಭಾವ ಬೋಧವನ್ನು ಮಾಡಿಕೊಳ್ಳುವ - ತತ್-ಸತ್-ಸೂತ್ರ.

೬) ಇದೇ ಸಾರ್ಥಕ ಜೀವನ ಎಂಬ - ಸಿದ್ಧಾಂತ.

ಈ ಆರು ವಿಭಾಗಗಳಲ್ಲಿ 'ಹೃದಯ ಸಮುದ್ರ' ದ ಕವನಗಳನ್ನು ವಿಭಜಿಸಿ ಅಭ್ಯಸಿಸುವ ಅವಶ್ಯಕತೆ ಇದೆ. ಭೌತಿಕ ಸಮುದ್ರ ಮನುಷ್ಯನ ದೇಹದ ಹೊರಗೆ ಪ್ರತ್ಯಕ್ಷ ಕಾಣುತ್ತದೆ. ಇದರ ಆಳ, ವಿಸ್ತಾರ, ಜಲಚರ ಪ್ರಾಣಿಜೀವನದ ಅಭ್ಯಾಸ ಮಾಡಬೇಕಾಗುತ್ತದೆ. ಇದರ ನೀರು - ಉಪ್ಪುಪ್ಪು! ಇದು ಇದರ ಸ್ವಭಾವ. ಇದು ಇರುವಿಕೆ. ಮನುಷ್ಯನ ದೇಹದ ಒಳಗಿನ - ಅಪ್ರತ್ಯಕ್ಷ ಜೀವನಾನುಭೂತಿಗೆ- ಅವನ ಹೃದಯ ಸಮುದ್ರ=ಅಂತಃಕರಣ, ಹೃದಯವಂತಿಕೆಯ ಗುಣ, ಗುರುಕೃಪೆಗೆ ಕಾರಣ. ಇದರ ಅರಿವು ಮಾಡಿಕೊಳ್ಳುವುದೇ ಮಾನವ ಜೀವನದ ಸಾರ್ಥಕತೆ. ಈ ಅಂತರಂಗದ ಹೃದಯ ಸಮುದ್ರದ ನೀರು ಉಪ್ಪುಪ್ಪಲ್ಲ. ಇದು ಅಸಾಮಾನ್ಯ ಜೀವನದ ಪ್ರಮುಖ ವಿಶೇಷ!

ಎಲ್ಲರ ಕಣ್ಣಿಗೆ ಕಾಣುವ ಸಮುದ್ರ-

''ಇದು ಜಡ ಪದಾರ್ಥವೇ?'' ಅಲ್ಲ; ದ್ರವ ಪದಾರ್ಥ.

''ಇದು ನೆಲದ ಸಿಹಿ ನೀರು!'' ಹಾಗೂ ''ಇದನ್ನು ಎಷ್ಟು ಕುಡಿದರೂ ತಣಿವು=ತೃಪ್ತಿ ಆಗದು. ಮುಗಿಲುಗನ್ನಡಿ ಬಡಿಸಿದಂತಿಹ ಜಲದ ಮೈಯಿಂದೆ ಜಳಜಳ! ಮತ್ತು

''ಜನ್ಮ ಮರಣದ ಚಕ್ರದಂತಿದೆ ವಕ್ರಮಾರ್ಗವು ನೀರಿಗೆ!''

ಎಂಬ ಮೂರು ಉಕ್ತಿಗಳು ಮನುಷ್ಯನ ಅಂತರಂಗದ ಹೃದಯ ಸಮುದ್ರವನ್ನು ವರ್ಣಿಸುತ್ತವೆ. ಆದುದರಿಂದ ಬೇಂದ್ರೆ ಕವಿಜೀವ ಹಾಡುತ್ತದೆ-

''ಎಲೆಲೆ ನೀರೇ! ದೂರದೀಗುರಿ! ಈ ಪ್ರವಾಹದಿ ನೆಲೆಸಿದೆ!
ಅಂತೆಯೇ ನಿನ್ನೊಳಗಿನೊಳಗಿನ ಸ್ಥೈರ್ಯ ಮೈಯಲಿ ಚಲಿಸಿದೆ!
ನಿನ್ನ ಜೀವನ ಕುಡಿದು, ಸುತ್ತಗೊ ಮಣ್ಣು ತುಂಬಿದೆ ಜೀವನಾ
ಬೆಳಕಿಗೆತ್ತಲು ಕಣ್ಣು ತೆರೆದಿದೆ ಹುಡುಕ ಬಯಸಿದೆ ದೇವನಾ
ತಾಯಿ ಎದೆಸೆರಗನ್ನು ಅವಚಿರುವಂಥ ಕೂಸಿನ ಅಂದದಿ
ಬೇರ ಹಿಡಿಯಲಿ, ತಿರೆಯ ಹಿಡಿಯುತ, ಮೊಗವ ತಿರುಹಿದೆ ಚೆಂದದಿ''

- ನೀರು

ಸಾತ್ವಿಕ ಭಾವದ ಅನ್ವೇಷಣ ಕ್ರಿಯೆ ಈ ಹೃದಯ ಸಮುದ್ರದ ಪ್ರಮುಖ ಕ್ರಿಯೆ. ಇಲ್ಲಿಯ ಹುಡುಕಾಟವೇ ಭಕ್ತಿ. ಬೇಂದ್ರೆ ಭಕ್ತಿ ಪಾರಂಪರಿಕವಲ್ಲ; ವೈಜ್ಞಾನಿಕ. ಅದರ ಬಗೆ ಹೀಗಿದೆ-

೧) ಶ್ರೀ ಅರವಿಂದರ ಹೃದಯಾರವಿಂದದಲ್ಲಿ ಮೂರ್ತಗೊಂಡದ್ದು ನಾಳಿನ ಜಗತ್ತನ್ನೂ ಜೀವಗಳನ್ನೂ ರೂಪಿಸುವ ಶಕ್ತಿ

೨) ದೇಹ, ಪ್ರಾಣ, ಮನ, ವಿಜ್ಞಾನ, ಸತ್, ಚಿತ್, ಆನಂದ ಇವು ಜೀವ ಹಾಗೂ ಭಗವಂತರಿಗೆ ಇರುವ ಏಳು ನೆಲೆಗಳು. ವಿಜ್ಞಾನ ನಿಲುವು=ಮಧ್ಯ=ಉದು! ಇದೇ ಸಂಪೂರ್ಣ ಪರಿವರ್ತನೆಯಾದಾಗ, ಜೀವ ಮತ್ತು ಭಗವಂತ ಸಂಬಂಧದ ಅರಿವು ಹೃದಯದಲ್ಲಿ ಆಗುತ್ತದೆ.

೩) ಇದನ್ನು ಅನುಭವಿಸುವವನೇ ನವಮನು!

೪) ಮನುಷ್ಯನ-ಪಾದ, ಕೈ, ಕಣ್ಣು, ಮುಖ, ಮನಸ್ಸು ಮತ್ತು ಹೃದಯ ಎಂಬ ಆರು ಕಮಲಗಳು ಸಂಸ್ಕಾರಗೊಂಡಾಗ, ಯೋಗ ಮಾರ್ಗದ ಷಟ್ ಚಕ್ರಗಳ ಶಕ್ತಿಯ ಅರಿವು ಆಗುತ್ತದೆ. ಅದು ಆಗುವುದಕ್ಕಾಗಿ - 'ಬಾರೆ ಬಾ ಮನೋನ್ಮನಿ!' ಎಂದು ಪ್ರಾರ್ಥಿಸಬೇಕಾಗುತ್ತದೆ. 'ಹೃದಯ ವೀಣೆ ಬೆರಳಿಚಿಸ ಕುಣಿಸು' (ಕವನ : ಪ್ರತ್ಯಕ್ಷ) ಎಂದು ಸತತ ಬೇಡಿಕೊಳ್ಳಬೇಕಾಗುತ್ತದೆ.

೫) ಭಾವಕ್ಕೆ ಇಳಿದು, ಸದ್ಭಾವ ಬಲಿಸಿ ಬರುವಂತೆ ಮಾಡು.

೬) ಕ್ಷೇತ್ರಜ್ಞ ಬರಲಿ, ಚೈತ್ಯೇಶನಾಗಿ ಮಧುಬೋಧ ಮಾಗುವಂತೆ ಮಾಡು.

೭) ಜವನವರ ಜವಕೆ ಶವಾಗದಂತೆ ಮಾಡು

೮) ಅಮೃತ ದೃಷ್ಟಿಯಲಿ, ದಿವ್ಯಸೃಷ್ಟಿಯಲಿ ನೆಲೆದು, ತೆರೆದು ನೋಡು. ಮೊದಲಾದ ಪ್ರಾರ್ಥನೆ ಸಾರ್ಥಕವಾಗದಾಗ, ಮನುಷ್ಯನಿಗೆ- ''ಇದು (ಹೃದಯದ ನೀರು). ಇದು ಉಪ್ಪು ನೀರ ಕಡಲಲ್ಲೋ, ನಮ್ಮ ಒಡಲಲ್ಲು ಇದರ ನೆಲೆಯು'', ''ಹರಿತsದ ಭಾವ, ಚಿರಿತsದ ಜೀವ, ಅದರೊಳಗ ಒಳಗೆ, ಒಳಗೆ'', ''ಒಳಗಿದೆ ಹೂವರಳಿದಪೊಲು ವಿಶ್ವದ ಇಡಿಗುಟ್ಟು'', ''ಒಳಚಿತ್ತವರಳುತಿದೆ'' ಎಂಬುದರ ಅನುಭಾವಗಳ ಬೋಧವಾಗುತ್ತದೆ. ಬೇಂದ್ರೆಯವರ ಕಣ್ಣು ಶ್ರೀಮಾತಾರವಿಂದರ ಕಣ್ಣು ಸೇರಿ, ಧ್ಯಾನಸ್ಥವಾದಾಗ, ಅವರ ಹೃದಯದೊಳಗಣ ಬೆಳಕು ಬೆಳೆಯುತ್ತ ಹೋಯಿತು. ಹೀಗಾಗಿ 'ಹೃದಯ ಸಮುದ್ರ,' ಕವನ

ಸಂಗ್ರಹದ ಪ್ರಥಮ ಮುಖ-ಗುರುಶಕ್ತಿಗೆ ನಮನ.

"ಯಾರು ಯಾರೊಳಗಿಹರೊ?
ಯಾರೊಳಗೆ ಬೆಳಗಿಹರೊ?
ಜೀವ ಜೇನೋ!
ದೇವ ಜಗದೀ ಹೂವ
ತೆರೆದು ಮುಚ್ಚುವನಾವ?
ನಾನೋ? ನೀನೋ?"

- ಎಲ್ಲ ಆಟ-ಮಾಟ-ನಗೆ!

ಎಂಬ ಹುಡುಕಾಟ ಬೇಂದ್ರೆ ಪ್ರಾರಂಭಿಸುತ್ತಾರೆ.

"ಆಗಬೇಕಾದ ಕಾರ್ಯ ಅನಂತವಾಗಿದೆ!
ನಾನೊಬ್ಬನೇ ಅಲ್ಲ, ನನ್ನ ಜೀವಮಾನದೊಳಗಾಗಿಯೇ
ಎಲ್ಲವೂ ಆಗಬೇಕಾಗಿಲ್ಲ.
....................................
ಪ್ರೇಕ್ಷರ ಚಪ್ಪಾಳೆಗಾಗಿ ಪಾತ್ರದಿಂದ
ಅಪಾತ್ರ ಕಾರ್ಯ ಮಾಡಿಸುವದು
ವಿನೋದವಲ್ಲ.
ಅಪಹಾಸ, ಉಪಹಾಸವು
ಪಾತ್ರವನ್ನೂ ಪ್ರೇಕ್ಷಕರನ್ನೂ
ಇಬ್ಬರನ್ನೂ ಹಾದಿಗೆಡಿಸುವುದು"

- ಪ್ರಾರ್ಥನೆ

ಎಂಬ ಎಚ್ಚರಿಕೆಯಿಂದ-

"ಅರಿವಿನ ಆನಂದ ಪಡೆಯಲು
ಆ ಆನಂದದಲ್ಲಿ ನಡೆಯಲು-ಈ ಜೀವ
ನಿರಂತರವಾಗಿ ಉನ್ಮುಖವಾಗಿದೆ;
ಸರ್ವತೋಮುಖವಾಗಿದೆ
ನಿನ್ನ ಬೆಳಕಿನಲ್ಲಿ ನನ್ನನ್ನು ಬದುಕಿಸು ತಾಯಿ
ಓ ಮಹಾಮಾತೆ, ಅದಿತಿಶಕ್ತಿ

- ಪ್ರಾರ್ಥನೆ

ಎಂಬ ಪ್ರಾರ್ಥನಾ ಮಾರ್ಗ=ಪೂರ್ಣಯೋಗ ಸಾಧನಾ ಮಾರ್ಗಾವಲಂಬಿಯಾಗುತ್ತಾರೆ ಬೇಂದ್ರೆಯವರು. ಹೃದಯ ಸಮುದ್ರದೊಳಗಿನ ನಾನು=ಅಂಬಿಕಾತನಯದತ್ತ

"ಬಾರೆ ಬಾ ಮಹೇಶ್ವರಿ!
ಮಹಾಕಾಳಿ, ರಮಾ,
ಮತ್ತು ಭಾರತೀ"

ಎಂಬ ನಾಲ್ವರು ತಾಯಂದಿರಿಗೆ ಕರೆ ಕೊಡುವುದು ಹೀಗೆ-

"ನಾಲಗೆಯಲಿ, ನಾಳದಲ್ಲಿ
ಜೀವಭಾವದಾಳದಲ್ಲಿ
ನೀವೇ ಜಗವಾಳುವಲ್ಲಿ
ನಿಮ್ಮುಸಿರೇ ಬಾಳುವಲ್ಲಿ
ಅಂಬಿಕಾತನಯನಾ
ನಿಲಿಸಿರವ್ವ ದಿನದಿನಾ"

- ನಾಲ್ವರು ತಾಯಂದಿರು

ಅಂಬಿಕಾತನಯದತ್ತ ಎಂಬ ಮುದ್ರಿಕೆ ಇರುವಂಥ ಕವನಗಳು ಬೇಂದ್ರೆಜೀವನದ ಸಾರಸರ್ವಸ್ವ. ಇಂಥ ಇನ್ನೊಂದು ಕವನ-ಓ ತಾಯಿ-ಮಾಯಿ! ಆ ತಾಯಿ ಸಾರುತ್ತಾಳೆ.

"ತೆರೆದೇನಿ ಯೋಗ, ನಿನ ಹೃದಯದಾಗ
ಬರಲೊಲ್ಲ್ಯಾಕ ಬ್ಯಾಗ ಒಳಗ"

ಅನಂತರದಲ್ಲಿ ತನ್ನ ರೀತಿಯನ್ನು-

"ಕೈ ತುತ್ತು ಮಾಡಿ ತುತುತ್ತ ಉಣಸುವಾಗ ಸುತ್ತು ಆಡಬೇಕs
ನಡುನಡುವೆ ನಕ್ಕು ಮತಮತ್ತ ಕದ್ದು ಕಣ್ ಕುಡಿಲೆ ನೋಡಬೇಕs"

ಎನ್ನುತ್ತಾಳೆ. ತಾಯಿಯ ಈ ಒಲವಿನ ಸಲಿಗೆಯ ಮೂಲಕ-

"ಅಂಬಿಕಾತನಯನ ನುಡಿ ನುಡಿತಾವ ತೆರೀ ತೆರೀ ಎಂದೇ
ಓ ತಾಯಿ, ಮಾಯಿ, ಶಿವಜಾಯಿ ಕಾಯಿ ಈ ಬಾಯಿ ತುಂಬು ಒಂದೇ"

- ಓ ತಾಯಿ-ಮಾಯಿ

ಎನ್ನುತ್ತಾರೆ ಬೇಂದ್ರೆ.

ಬೇಂದ್ರೆ ಕಾವ್ಯದ ಎರಡನೆಯ ಮುಖ ಕಾವ್ಯ ದರ್ಶನ. ಅದು-

"ವೇದಕ್ಕೂ ಹಿರಿದು, ವಚನಕ್ಕೂ ಕಿರಿದು
ನುಡಿಕಟ್ಟಿ ಒಟ್ಟಬಹುದು
ಆ ಇರವನಿರದೆ ಅರಿವಾಗದೆಯೆ
ಶ್ರುತಿಯೆಂತು ಹುಟ್ಟಬಹುದು!"

- ಅದ ಬರಿದೆ ನುಡಿಸಬಹುದೆ

"ಅರುಹಾಗಬೇಕು, ಹರುವಾಗಬೇಕು, ಬಳಿತುದಿಗೆ ಏಳಬೇಕು" ಎಂಬ ಅಭೀಪ್ಸಿತ ಕಾವ್ಯಕ್ಕೆ-

"ಕಾವ್ಯದಂತೆ ಕವಿಯು ಆತ್ಮವೂ ರಸ
ಪ್ರೇಕ್ಷಕರ ಆತ್ಮವೂ ರಸವೇ
ಆ ರಸದ ಮಾರ್ಗದಿಂದ ನಾವು
ಸೂತ್ರಧಾರ ಶಕ್ತಿಗೆ ಆಧೀನರಾಗುವಾ"

- ಪ್ರಾರ್ಥನೆ

ಎನ್ನುತ್ತಾರೆ ಬೇಂದ್ರೆ. ಕವಿ, ಕಾವ್ಯ, ಶ್ರೋತೃ ಇವರಲ್ಲಿ ಸೇತುಬಂಧಕಾರ್ಯ ಬೇಂದ್ರೆ ಸಾಗಿಸುತ್ತಾರೆ. ಅವರಿಗೆ ಅವರ ಕಾವ್ಯ-

"ಅದೊ ಕರ್ಣದಲ್ಲಿ, ಒಳುವರ್ಣದಲ್ಲಿ, ಸ್ವರವರ್ಣವಲ್ಲಿ ಅರಳಿ
ರಸರಾಗದಲ್ಲಿ, ಅನುರಾಗವಲ್ಲಿ, ಹೊಸ ಒಲವು ಲಹರಿ ಮರಳಿ
ಕರೆಯುತಿಹುದು ಬಗೆಬಗೆಯ ನಗೆಯು ಒಗುಮಿಗುವ ನಾಕದಲ್ಲಿ
ಗಿಣಿಗಿಣಿಲು ಗಂಟೆ, ಮಧುರಸವನೀಂಟೆ, ಗಂಧರ್ವಲೋಕದಲ್ಲಿ"

- ಇಂದ್ರಜಾಲ

ಶ್ರಾವಣ ಕವಿ ಬೇಂದ್ರೆಯವರ ಜೀವನದಲ್ಲಿ ಗೆಳೆಯರಿಗೆ ಅತ್ಯಂತ ಮಹತ್ತ್ವ. ಗುರು ಶಿಷ್ಯ ಸಂಬಂಧ ಭದ್ರಗೊಳಿಸಿದ ಗೆಳೆಯ ಶಂಕರಗೌಡರು-

"ಬಾಳಿನಲ್ಲಿ ಕೈ ಹಿಡಿದು ನಡೆಸಿದಿರಿ ಜೊತೆಯ ಅಣ್ಣಗಳನು
ತಮ್ಮಗಳಿಗೆ ಕಂಡದ್ದ ತೋರಿ ತೆರೆಸಿದಿರಿ ಕಣ್ಣುಗಳನು
ಹೆಣ್ಣುಗರುಳಿನಲಿ ತೂಗಿ ನೋಡಿದಿರಿ ಹೊನ್ನು ಮಣ್ಣುಗಳನು"

- ಗೆಳೆಯ ಶಂಕರಗೌಡರಿಗೆ

ಎಂಬ ವ್ಯಕ್ತಿತ್ವ ಉಳ್ಳವರು. ಇವರ ಮೂಲಕ ಬೇಂದ್ರೆಯವರಿಗೆ ಪಾಂಡಿಚೇರಿಯ ಶ್ರೀ ಅರವಿಂದ, ಶ್ರೀಮಾತೆಯವರ ದರ್ಶನ ದೀಕ್ಷೆಯಾಗಿ-ಬೇಂದ್ರೆ ಜೀವನ ವಿಕಾಸಗೊಂಡಿತು. ಇದು ಈ ಸಂಗ್ರಹದ ಮೂರನೆಯ ಮುಖ- ಗೆಳೆತನದ ವಿಕಾಸ.

ಸಾಲ್ಮನೆಯ ಮುಖ - ಬೇಂದ್ರೆ ಜೀವನದ ಪುನರ್ನ್ಯಾಸವನ್ನು ಸೃಷ್ಟಿಸಿತು. ಈ ಕಾರ್ಯದಲ್ಲಿ ಭಗವತ್ ದೃಷ್ಟಿ ಪ್ರಮುಖ. ೧೯೫೦ರಲ್ಲಿ ಶ್ರೀ ಅರವಿಂದರ ಸಮಾಧಿ ದರ್ಶನ ಪಡೆದು ಮರಳುವಾಗ, ಬೇಂದ್ರೆ ಅನುಭವಿಸಿದ ಅನುಭಾವ ಬೋಧ ಹೀಗಿದೆ-

''ಅರವಿಂದವೆಂಬ ಬರಿ ಹೆಸರಿನಲ್ಲೆ ಸೌಗಂಧ ತುಂಬಿ ಬಹುದು
ಚಾರಿತ್ರ್ಯವನ್ನು ನೆನೆಸಿದರೆ ಸಾಕು, ಬ್ರಹ್ಮಾಂಡ ಬಿಂಬಿಸುವದು
ಆ ಒಂದೆ ರಾತ್ರಿಯಲಿ ಬಯಲು ತುಂಬಿತೋ ಪಾರಿಜಾತ ಕೀರ್ತಿ
ಈ ವಿಶ್ವರೂಪದೆ ಒಂದಾಗಿ ನಿಂತಿತೋ ಆ ವಿರಾಟ್ ಮೂರ್ತಿ''

''ನವ ಜನ್ಮ ಯಜ್ಞ ಪರಿಪೂರ್ಣವಾಯ್ತು ಅಜ್ಞಾನವಾಯ್ತು ಹವಿಯು
ಅವಭೃತ ಸ್ನಾನ ಈ ದೇಹದಾನ, ಗ್ರಹಮುಕ್ತನಾದ ರವಿಯು
ಪೃಥ್ವಿಯಣೆಯಲ್ಲಿ ಅರವಿಂದ ತತ್ತ್ವದವರೋಹವಾಗಿ ಸಾರ್ಥ
ಶ್ರೀ ಮಾತೆಯವರ ಗುರುಪಾದವೋ ವಿಶ್ವಯೋಗ ತೀರ್ಥ!''

- ಮಹಾಪ್ರಸ್ಥಾನ

ಈ ಗುರುದ್ವಯರ ತಪದ ಪರಿಣಾಮವಾಗಿ-

''ಮಾನವನ ಹೃದಯವನೆ ಯೋನಿಗೊಳಿಸಿ ಬರಲಿಹುದು
ದೇವಜಾತಿ'' ಎಂಬುವುದರಲ್ಲಿ ಬೇಂದ್ರೆಯವರಿಗೆ ಅಪಾರ ನಂಬಿಕೆ.
''ನವಧರ್ಮ ಮೇಘ ಘನಘೋಷಗೊಂಡು ಅವತರಿಸಿ ದೇವವೃಷ್ಟಿ
ಕುಕ್ಷೇತ್ರದಲ್ಲಿ ಮೊಗದೋರಲುಂಟು ಆನಂದದೊಂದು ಸೃಷ್ಟಿ''

- ಮಹಾಪ್ರಸ್ಥಾನ

ಇದು ಅವಾಗ. ಹೊಸ ಸೃಷ್ಟಿಯುಗದ ಆರಂಭ. ಇದು ಆರಂಭವಾಗುವುದಕ್ಕೆ ಮುನ್ನ ಇಹಲೋಕದ ಮಾನವರಿಗೆ-

''ಜಾಣುವಿಕೆಯೊಳಗೆ [illegible] ಬಾಚಿಟ್ಟರೆ ದಿರಂವ ಮಹತ್ತೋ ವುಹೀಯುನ'' (ಕವನ - ಜಾಣುವಿಕೆಯೊಳಗೆ) ದರ್ಶನವಾಗುವುದು ಅವಶ್ಯ. ಭೂಲೋಕದ ನಿತ್ಯದ ಜೀವನವು ದಿವ್ಯ ಜೀವನದ ಅನುಭವವನ್ನು ಕೊಡಬೇಕಾಗುತ್ತದೆ. ಇದಕ್ಕಾಗಿ ಪೂರ್ಣಯೋಗ ಸಾಧನೆ ಮಾಡುವುದರಿಂದ-

''ಹಾದಿ ಕಾಣದಲಿ ಹಾದಿ ತೆರೆಯುತಿದೆ
ಹಕ್ಕಿ ಹಕ್ಕಿಗಾಗಿ
ಕೂಗಿ ಕರೆಯುತಿದೆ, ಕುಣಿದು ಬರುತಿದೆ
ಸಾಕ್ಷಿಪಕ್ಷಿಗಾಗಿ''

- ಪರಮ-ತುಂಬಿ

ಎಂಬ ರೀತಿಯಲ್ಲಿ ಪ್ರತಿ ಮಾನವನ ಸಾಕ್ಷಿ ಪುರುಷ ಜಾಗೃತನಾಗುತ್ತಾನೆ ಎಂಬುದು ಈ ಕವನ ಸಂಗ್ರಹದ ಐದನೆಯ ಮುಖ. ಇದು ತತ್-ಸತ್-ಸಂಬಂಧ ಸೂತ್ರ.

'ಹೃದಯ ಸಮುದ್ರ'ದ ಆರನೆಯ ಮುಖ- ಜೀವನದಲ್ಲಿ ಸಾರ್ಥಕತೆಯನ್ನು ಅನುಭವಿಸುವ ಸಿದ್ಧಾಂತ. ಇರವು-ಅರಿವು ಒಂದಾದಾಗ ಸಾರ್ಥಕತೆ ಉದ್ಭವಿಸುತ್ತದೆ. ಶ್ರೀ ಅರವಿಂದರು 'ಸಾವಿತ್ರಿ' ಮಹಾಕಾವ್ಯ ರಚನೆಯಲ್ಲಿ ಸಾರ್ಥಕತೆಯನ್ನು ಅನುಭವಿಸಿದರು. 'ಸಾವಿತ್ರಿ' ಮಹಾಕಾವ್ಯದ ನಾಯಕ ಅಶ್ವಪತಿ. ಅವನು ಆದಿಶಕ್ತಿಯ ದರ್ಶನಕ್ಕಾಗಿ ಮಾಡಿದ ಪ್ರವಾಸ ಅಮೋಘ! ಇದು ಕೇವಲ ವರ್ಣನೆಯ್ಯಲ್ಲ, ಇದು ಶ್ರೀ ಅರವಿಂದರು ತಲುಪಿದ ತಪದ ಶಿಖರ. ಈ ಶಿಖರವನ್ನು ತಲುಪುವ ಅಭೀಪ್ಸೆಯಿಂದ ಬೇಂದ್ರೆಯವರು 'ಸಾವಿತ್ರಿ' ಮಹಾಕಾವ್ಯದ ಭಾವಾನುವಾದ ಕಾರ್ಯದಲ್ಲಿ ತೊಡಗಿದರು. ಆಗ ಸೃಷ್ಟಿಯಾದ ಕವನಗಳೇ ೪೮ ರಿಂದ ೫೭. ಬೇಂದ್ರೆ ದರ್ಶನ ಹೀಗಿದೆ-

''ಕಲ್ಲಿನಲ್ಲೆ ದೇವತ್ವ ಮೂಡಿ ಆದರ್ಶವಾಗುತಿರಲು
ಮನುಜನಲ್ಲಿ ಯಾ ರೋಗ ಮೂಡಿ, ಜೀವನವೆ ಬೊಕ್ಕುಬೊರಲು
ಆಗುತಿಹುದೊ? ಆ ಬೀಜ ಹುರಿದು ನಿರ್ನಾಮಗೊಳಿಸಲಹುದು
ಅಲ್ಲಿ, ಇಲ್ಲಿ ಒರಗುವದದೇಕೆ, ತುದಿಯಲ್ಲಿ ಫಲವು ಬಹುದು''

- ಗಿರಿಶಿಖರ

ಬೇಂದ್ರೆಯವರ ಜೀವನದಲ್ಲಿ ೨೮-೨-೧೯೫೬ ಒಂದು ರೀತಿಯ ಆತ್ಮಸಾಕ್ಷಾತ್ಕಾರದ - ಸುಪ್ರಮಾನಸ ಅವತರಣ ಶಕ್ತಿಯ ಅನುಭಾವ ಬೋಧದ ದಿವ್ಯ ಘಳಿಗೆ! ಅದನ್ನು ಬೇಂದ್ರೆ

''ಸಹಸ್ರ ತಂತ್ರೀ ನಿಃ ಸ್ವನದಂತೆ
ಮಾತರಿಶ್ವನ ಘನಮನದಂತೆ
ಗುಡುಗಾಡುತ್ತಿದೆ ಗಗನದ ತುಂಬ
ಪ್ರಣವ ಪ್ರವೀಣನ ನಾದಸ್ತಂಭ''

- ಸಹಸ್ರತಂತ್ರೀ ನಿಃಸ್ವನದಂತೆ

ಎಂದು ಕಂಡರು, ಅನುಭವಿಸಿದರು. ತಮ್ಮ ಜೀವನ ಸಾರ್ಥಕವಾಯಿತು ಎಂಬ ತೃಪ್ತಿ ಪಡೆದರು. ಇದರ ಮೂಲಕ ಬೇಂದ್ರಯವರ ೧೯೫೬ ರಿಂದ ೧೯೮೧ ರ ವರೆಗಿನ ಜೀವನ, ಹೊಸ ಚಾರಿತ್ರ್ಯ ನಿರ್ಮಿತಿಗೆ- ಸಂತ ಜೀವನದ ಅರಿವು-ಇರವಿಗೆ ಹಾದಿ ಮಾಡಿಕೊಟ್ಟಿತು. ಆದರೆ ಇದರ ಪ್ರಾರಂಭ ೧೯೫೬ಕ್ಕಿಂತ ಮೊದಲು ಎಷ್ಟು ವರ್ಷ ಆಗಿತ್ತು ಎಂಬುದು ನಿಶ್ಚಿತ ಹೇಳಲಾಗುವುದಿಲ್ಲ. ಆದರೆ ಅದರ ಸ್ಪಷ್ಟ ಹೆಗ್ಗುರುತುಗಳನ್ನು ''ಸುದರ್ಶದಲ್ಲಿ'' ಎಂಬ ಕವನದಲ್ಲಿ ಕಾಣುವುದು ಹೀಗೆ-

"ಮೂಡಲಿನ ಕಡಲಿನಲಿ ಆಲ್ಲೋಲ ಕಲ್ಲೋಲ!
ಮಂತ್ರಪುಷ್ಪದ ವೇದ ಘೋಷವಾದಂತೆ.
ವಿಶ್ವಮಾತೆಯ ಪ್ರಾರ್ಥನೆಯ ಕೇಳಿ
ಶಾಂತಿ ಸಾಗರದ ಬಸಿರಲ್ಲಿ ಸಂತೋಷವಾದಂತೆ
ಕೃಷ್ಣವರ್ಣದ ವಾಸುದೇವ ಬೀರಿದ ಬೆಳಕು
ಘನನೀಲ ಗಗನದಲಿ ಸೋಸಿ ಬಂದಂತೆ

.................................

ಚಾಚುತಿದೆ ಹೊಸ ನಸುಕು ಮೂಡಲಿರುವಂತೆ"

ಇಂಥ ದಿವ್ಯಾನುಭವವನ್ನು ಘನನಿದ್ರೆಯೆಂದು ಭಾವಿಸುವುದು, ಮನವ ದಡ್ಡತನ, ತಿಳಿಗೇಡಿತನವಲ್ಲದೇ ಮತ್ತೇನು? ಆದರೆ ಬೇಂದ್ರೆಯವರಿಗೆ ಶ್ರೀ ಅರವಿಂದ ಮತ್ತು ಶ್ರೀ ಮಾತೆಯವರ ಸುಪ್ರಮಾನಸವ ಅಪ್ರಮೇಯ ಕಿರಣಗಳು ಕಂಡವು.- ನಾದ ಮತ್ತು ವರ್ಣಗಳ ಹೊಸ ಲೋಕ ದರ್ಶನವಾಯಿತು. ಇದರಿಂದ ಪುಳಕಿತಗೊಂಡ ಬೇಂದ್ರೆಯವರ ನಿತ್ಯ-ಜೀವನವ ಪ್ರತಿಕ್ಷಣವೂ ಸಾರ್ಥಕ ಜೀವನವಾಗಿ ಪರಿವರ್ತನಗೊಂಡು, ಸಂಪೂರ್ಣ ಸಮರ್ಪಿತ ಜೀವನವಾಯಿತು. ಇದರ ಫಲವಾಗಿ ಬೇಂದ್ರೆಯವರಿಗೆ ಸಂಖ್ಯಾಲೋಕ ಕಾಣತೊಡಗಿತು. ಸಂಖ್ಯಾಭಾಷೆ ಅರ್ಥಪೂರ್ಣವಾಯಿತು. ಇದರಿಂದ ಅವರ ಜೀವನ ಸಾರ್ಥಕವಾಯಿತು. ಈ ದೃಷ್ಟಿಯಿಂದ ಬೇಂದ್ರೆಯವರ 'ಹೃದಯ ಸಮುದ್ರ' ಕವನಗಳ ಅಧ್ಯಯನ, ಮನನ, ಚಿಂತನವು, ಪ್ರತಿಯೊಬ್ಬರಿಗೆ ಅವರವರ ಜೀವನದ ಸಾರ್ಥಕತೆಯನ್ನು ಕಂಡುಕೊಳ್ಳಲು ಸಹಾಯಕವಾಗುತ್ತದೆ ಎಂಬುದು ನಿಶ್ಚಿತ.

ಡಾ|| ವಾಮನ ಬೇಂದ್ರೆ
ಸಹ ನಿರ್ದೇಶಕರು
ವರಕವಿ ಡಾ|| ದ. ರಾ. ಬೇಂದ್ರೆ
ಸಂಶೋಧನ ಸಂಸ್ಥೆ ಹಾಗೂ ಬೇಂದ್ರೆ ಸಂಗೀತ ಅಕಾಡಮಿ.

"ಬೇಂದ್ರೆ ಕುಟೀರ",
ಹುಬ್ಬಳ್ಳಿ - ೩೦
೧೮-೫-೨೦೦೩

ಕಾರ್ಯಾಲಯ : "ಬೇಂದ್ರೆ ಕುಟೀರ", ವಿಶ್ರಮ ಚೇತನ, ಗೋಕುಲ ರಸ್ತೆ ಹುಬ್ಬಳ್ಳಿ-೫೮೦ ೦೩೦. ದೂರವಾಣಿ : ೨೩೩೦೪೬೬

# ಹೃದಯಸಮುದ್ರದಲ್ಲಿ ಅರಳಿ ನಿಂತ ಮಾತೃತತ್ತ್ವ ದರ್ಶನ

ವರಕವಿ ದ. ರಾ. ಬೇಂದ್ರೆಯವರು "ಹೃದಯ ಸಮುದ್ರ" ಕವನ ಸಂಕಲನಕ್ಕೆ ಮುನ್ನುಡಿಯನ್ನು ಬರೆಯುತ್ತಾ ಹೇಳುತ್ತಾರೆ - "ಕವಿ ಜೀವನದಲ್ಲಿ ವಸ್ತುನಿಷ್ಠೆ, ಆತ್ಮನಿಷ್ಠೆಗಳು ಹೃದಯ ನಿಷ್ಠೆಯಲ್ಲಿ ಒಗತನದ ಬಾಳ ನಡೆಸುವವು" ಎಂದು. ಹೀಗಾಗಿ ಬೇಂದ್ರೆಯವರು ತಮ್ಮ ಜೀವನದಲ್ಲಿ ಹೃದಯ ನಿಷ್ಠೆಯ ಔನ್ನತ್ಯವನ್ನು ಬಿಂಬಿಸಿದ್ದಾರೆ. ಈ ಔನ್ನತ್ಯದ ಮಹತ್ವದ ಪ್ರತೀಕ ಬೇಂದ್ರೆಯವರ ಮಾತೃ ತತ್ತ್ವದರ್ಶನ! ಈ ಮಹಾನ್ ದರ್ಶನವನ್ನು "ಹೃದಯ ಸಮುದ್ರ" ದಲ್ಲಿಯ ಕೆಲವು ಕವನಗಳನ್ನು ಆಯ್ದುಕೊಂಡು ನಿರೂಪಿಸಬಯಸುತ್ತೇನೆ. ಇದಕ್ಕೂ ಪೂರ್ವದಲ್ಲಿ ಕವಿ ದತ್ತಾತ್ರೇಯರಲ್ಲಿ ಮಾತೃತತ್ತ್ವ ಹೇಗೆ ಬೀಜಾಂಕುರವಾಗಿದೆ ಎಂಬುದನ್ನು ಗುರುತಿಸೋಣ.

ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರ ಕಾವ್ಯನಾಮ "ಅಂಬಿಕಾತನಯದತ್ತ". ತಾಯಿಯನ್ನು ನೆನೆದು, ತಾಯಿ "ಅಂಬಿಕೆ"ಯ ಹೆಸರಿನಲ್ಲೇ ಕಾವ್ಯ ರಚನೆಯಲ್ಲಿ ತೊಡಗಿರುವುದು. ಇವರು ತಮ್ಮ ವೈಯಕ್ತಿಕ ಜೀವನದಲ್ಲಿ ಹಾಗೂ ಕಾವ್ಯಜೀವನದಲ್ಲಿ ತಾಯಿಗೆ ನೀಡಿದ ಮಹೋನ್ನತ ಸ್ಥಾನವನ್ನು ಬಿಂಬಿಸುತ್ತದೆ. ಕವಿ ಬೇಂದ್ರೆ ಹೇಳುತ್ತಾರೆ.-

"ತಾಯಿ ಮಾಯಿ ಅಂಬಿಕೆಯೆ; ನಿನ್ನ ತನಯ ದತ್ತನು
ನೀನು ಇತ್ತುದಿತ್ತನು
ನಿನ್ನ ಜನುಮದೊಂದು ಪಾಡು, ಹಾಡು ಆಗಿ ಮೂಡಿತು
ನನ್ನ ಕೊರಳ ಹಾಡಿತು।

.......................................

ಹಾಡಲಾಗಿ ಕವಿಯು ಎಂದು ಜನವು ಕರೆದಿದೆ
ನಿನ್ನ ಹೆಸರು ಮರೆಗಿದೆ।
ನಿನ್ನ ಲಲ್ಲೆಯಲ್ಲಿ ಹುಟ್ಟಿ ಬೆಳೆದು
ಬೇರೆ ಏನು ಬಲ್ಲದು?।

...........................

- ಅಂಬಿಕಾತನಯದತ್ತ

ಬೇಂದ್ರೆಯವರಿಗೆ ಜೀವನವೇ ಕಾವ್ಯ, ಕಾವ್ಯವೇ ಜೀವನ. ಅಂತೆಯೇ ಅವರ ಜೀವನ ಮಹಾಕಾವ್ಯವೇ 'ಔದುಂಬರಗಾಥೆ!'. ಕವಿ ಅಂಬಿಕಾತನಯದತ್ತನು, ತನ್ನ ತಾಯಿ ಅಂಬಿಕೆ ತನಗೆ ಇತ್ತುದನ್ನು ವಿಶ್ವಕ್ಕೆ ಇತ್ತನು, ಎಂದು ನುಡಿದು, ತಾಯಿ ಜನುಮದ ಒಂದು ಪಾಡೆ ಹಾಡು ಆಗಿ ಮೂಡಿತು ಎನ್ನುತ್ತಾರೆ. ಹೀಗಾಗಿ ತಾಯಿ ತನಗೆ ಇತ್ತುದನ್ನು, ಈತ ಜಗತ್ತಿಗೆ ಇತ್ತಿದ್ದಾನೆ. ಅಂತೆಯೇ ಬೇಂದ್ರೆ ಹೇಳಿರುವುದು :

"ನಿನ್ನ ಹೆಸರಿನಲ್ಲಿ ನಾನು ಬರೆವುದೇನು ಸೋಜಿಗ,
ತಿಳಿಯಲಾರದೀ ಜಗ"

ಎಂದು.

ಈ ಸಂಬಂಧದ ಇನ್ನೊಂದು ಕವನ "ನಾನು" ಅಧ್ಯಯನಾರ್ಹ. ತಾಯಿ ಎಂಬ ಗುಣವು ಜನ್ಮಕೊಟ್ಟ ತಾಯಿ, ಕನ್ನಡ ಮಾತು ಕಲಿಸಿದ ಕನ್ನಡತಾಯಿ, ಭರತಮಾತೆ, ಭೂಮಿತಾಯಿ ಮತ್ತು ವಿಶ್ವಮಾತೆಯಾಗಿ ಐದು ರೂಪ ತಾಳುತ್ತದೆ ಎಂಬುದು ಕವಿಯ ಅನುಭಾವ. ಅದಕ್ಕೆಂದೆ ಅವರು ಹೇಳುತ್ತಾರೆ :

"ಈ ಐದು ಐದೆಯರ ಪಂಚಪ್ರಾಣಗಳಾಗಿ
ಈ ಜೀವ ದೇಹನಿಹನು"

ಎಂದು. ಇದಲ್ಲದೆ ಈ "ದೇಹನು"

"ವಿಶ್ವದೊಳನುಡಿಯಾಗಿ ಕನ್ನಡಿಸುತಿಹನಿಲ್ಲಿ
ಅಂಬಿಕಾತನಯನಿವನು"

ಎಂದು ಹೇಳುವುದರ ಮೂಲಕ, ದತ್ತನು, ಅಂಬಿಕೆಯ ತನಯನು, ವಿಶ್ವದ ಒಳನುಡಿಯನ್ನು ಕನ್ನಡಿಸುತ್ತಿದ್ದಾನೆ ಎಂಬ ಆಂತರಿಕ ಇಂಗಿತವನ್ನು ಅವರು ಅಭಿವ್ಯಕ್ತಗೊಳಿಸಿದ್ದಾರೆ. ಒಂದು ಅರ್ಥದಲ್ಲಿ ಬೇಂದ್ರೆ ಕಾವ್ಯೋದ್ಯೋಗದ ಉದ್ದೇಶವೇ ವಿಶ್ವದ ಮಾನವ-ಕುಲದಲ್ಲಿ ಅಸೂಯೆ ಇಲ್ಲದ, ಅನಸೂಯ ತತ್ತ್ವ ಪ್ರತಿಪಾದಕ ಹೃದಯಗೀತೆ- ಇದೇ ಅಂಬಿಕಾತನಯನಾ ಕಗ್ಗ, ತಾಯಿನುಡಿ.

ಪ್ರಖ್ಯಾತ ವಿಮರ್ಶಕರಾದ ಪ್ರೊ॥ ಬಿ. ಎಚ್. ಶ್ರೀಧರ ತಮ್ಮ "ಪಸರಿಪ ಕನ್ನಡಕ್ಕೊಡೆಯನೀಗ ದರಾಂಕಿತ ಬೇಂದ್ರೆ"* ಎಂಬ ಕೃತಿಯಲ್ಲಿ ಹೇಳುತ್ತಾರೆ, "ಬೇಂದ್ರೆಯವರಿಗೆ ಮಾತೃದೇವೋಭವ ಎಂಬುದೇ ಮಹಾ ಆದರ್ಶವು" ಎಂದು. ಅವರು-

"ಮೈಯೆಲ್ಲಾ ಬಾಯಿ ನೀನು
ತುಟಿ ಮುದ್ದು ಹಾಲುಜೇನು"

ಎಂದು ಹೇಳಿದ್ದರಲ್ಲಿ ಭೂಮಿತಾಯಿಯ ವಾತ್ಸಲ್ಯದ ಪರಾಕಾಷ್ಠೆಯನ್ನು ಪ್ರಹರ್ಷೋದನಿರ್ಭರವಾಗಿ ಪ್ರಕಟಿಸಿರುವುದು ಅನನ್ಯ" ಎಂದು. ಇದೇ ಕೃತಿಯಲ್ಲಿ "ಅಂದತ್ತ (ಅಂಬಿಕಾತನಯದತ್ತ)ರ ವಾಣಿ, ತನ್ನ ಸ್ವಯಮುದ್ಭವತೆಯನ್ನು ಬಲ್ಲದು. ತಾನು ಯಾವ ಮಟ್ಟದ ಕವಿ ಎಂಬುದು ಬೇಂದ್ರೆಯವರಿಗೆ ಗೊತ್ತು"** ಎಂದು ಹೇಳುತ್ತಾರೆ. ಈ ಕೆಳಗಿನ ನುಡಿಯನ್ನು ಉಲ್ಲೇಖಿಸುತ್ತಾರೆ-

"ಗುರುವಿಂದ ತುಂಬಿ, ಅರವಿಂದ ತುಂಬಿ, ತುಂಬುರುವಿನಿಂದ ತುಂಬಿ
ತಾಯೆಂದು ತುಂಬಿ, ತಂದೆಂದು ತುಂಬಿ, ಕಂದನ್ನ ತನ್ನ ತುಂಬಿ
ಅಂಬಿಕೆಯ ತುಂಬಿ, ನಂಬಿಕೆಯು ತುಂಬಿ, ಕಣ್ಗೊಂಬೆ ರಂಭೆ ತುಂಬಿ
ಶ್ರೀಮಾತೆ ತುಂಬಿ, ಈ ಮಾತೆ ತುಂಬಿ, ತಂತಾನೆ ಬಂತು ತುಂಬಿ!"

---

★ ಶ್ರೀಧರ ಬಿ. ಎಚ್. 'ಪಸರಿಪ ಕನ್ನಡಕ್ಕೊಡೆಯ ನೀಗ ದರಾಂಕಿತ ಬೇಂದ್ರೆ', ಅಂಬಿಕಾತನಯದತ್ತ ವೇದಿಕೆ, ಶ್ರೀಮಾತಾ ಪ್ರಕಾಶನ, ಧಾರವಾಡ ೧೯೮೭ ಪುಟ.೯

★ ಅದೇ ಕೃತಿ ಪುಟ ೪೨.

ಈ ತುಂಬಿ, ದತ್ತಕಾವ್ಯಸಂಪತ್ತನ್ನು ತುಂಬಿದ ನಂಬಿಕೆಯಿಂದ ತುಂಬಿದ ಅಂಬಿಕೆಯ ತುಂಬಿ ಎನ್ನುವುದು ಬೇಂದ್ರೆ ಕಾವ್ಯೋದ್ಯೋಗದ ಒಳಗುಟ್ಟಾಗಿದೆ.

ಈ ಹಿನ್ನೆಲೆಯಲ್ಲಿ ''ಹೃದಯ ಸಮುದ್ರ''ದಲ್ಲಿ ಒಡಮೂಡಿರುವ ಹನ್ನೆರಡು ಆಯ್ದ ಕವನಗಳಲ್ಲಿ ಅಭಿವ್ಯಕ್ತಗೊಂಡ ತಾಯಿ ತತ್ತ್ವದ ದರ್ಶನವನ್ನು ಪಡೆಯೋಣ.

''ಹೃದಯ ಸಮುದ್ರ''ದ ಮುನ್ನುಡಿಯಲ್ಲಿ ಬೇಂದ್ರೆಯವರು ಹೇಳುತ್ತಾರೆ- ''ಇವುಗಳಲ್ಲಿ ಹಲವು ಪಾಂಡಿಚೇರಿಗೆ ಹೋಗುವಾಗ, ಅಲ್ಲಿರುವಾಗ, ಅಲ್ಲಿಂದ ಮರಳಿ ಬರುವಾಗ, ಅದರ ನೆನಪು ಆದಾದಾಗ ಬರೆದವುಗಳು. ಪ್ರಾರ್ಥನಾ ರೂಪದಲ್ಲಿ ಕೆಲವು; ಕೆಲವು ಅನುಭವವರ್ಣನಾರೂಪ; ಕೆಲವು ಅನುಭವ ಸಹಜನಿತವಾದವುಗಳು; ಕೆಲವು ಕಾಣ್ಕೆ, ಕೆಲವು ಕಣಸು-ಕನಸು, ಕೆಲವು ಧ್ವನಿಸುವ ಅನುವಾದವು. ವಾಚ್ಯ-ಅನಿರ್ವಾಚ್ಯದ ನಡು ಸೀಮೆಗೆ ಸೇರಿದುವು. ಕನ್ನಡ ನುಡಿಗೆ ಅಸಂಭಾವ್ಯವಾಗಿ ತೋರುವುದು ಇದರಲ್ಲಿ ಯಾವುದೂ ಇಲ್ಲ ಎಂದು ನನಗೆ ತೋರುವುದು'' ಎಂದು. ಹೀಗಾಗಿ ಇಲ್ಲಿಯ ಕವನಗಳನ್ನು ಅಧ್ಯಯನಮಾಡುವಾಗ ಕವಿಯ ಈ ಮುನ್ನುಡಿಯ ಪಥದಲ್ಲಿ ಸಂಚಲನ ಮಾಡಬೇಕಾಗುತ್ತದೆ. ಪಾಂಡಿಚೇರಿಯ ಶ್ರೀಮಾತೆ-ದಿ ಮದರ್, ಇವರ ಸ್ಫೂರ್ತಿ ಪ್ರಭಾವಗಳ ಭಾವದೀಪ್ತಿಯಾಗಿ ಒಳಮೂಡಿರುವುದು ಗಮನಾರ್ಹ. ಆದರೂ ಈ ಕವನಗಳ ಸಾರ್ವತ್ರೀಕರಣದಲ್ಲಿ ಇವುಗಳ ಸಾರ್ಥಕತೆಯಿದೆ.

''ಶ್ರೀಮಾತೆಗೆ'' ಈ ಕವನವು ಅರವಿಂದಾಶ್ರಮದ ದಿ ಮದರ್‌ಗೆ ಸಲ್ಲಿಸಿದ ಪ್ರಾರ್ಥನೆಯಾಗಿದೆ. ದತ್ತಾತ್ರೇಯ ರಾಮಚಂದ್ರ ಬೇಂದ್ರೆ ತಮ್ಮ ತಾಯಿ, ಅಂಬಿಕೆಯಲ್ಲಿಯ ನಂಬಿಕೆಯನ್ನು ಪಾಂಡಿಚೇರಿಯ ಶ್ರೀಮಾತೆಯವರೆಗೆ ವಿಸ್ತರಿಸಿರುವುದು ಅವರು ಮಾತೃತತ್ತ್ವಕ್ಕೆ ನೀಡಿದ ಔನ್ನತ್ಯವನ್ನು ಬಿಂಬಿಸುತ್ತದೆ. ಈ ಪ್ರಾರ್ಥನೆಯಲ್ಲಿಯ ಮೊದಲ ನುಡಿ ಹೀಗಿದೆ-

''ಮಾತುಗಳ ಮಾತೆ ನೀನುಽ
ಮಾತಿನಲಿ ಹೂತು ಬರಬಾರದೇನು ?
ಉಸಿರುಗಳ ಉಸಿರೆ ನೀನುಽ
ಉಸಿರಿನಲಿ ಹಸಿರಾಗಿ ಹರಿದೆ ನಾನು.''

''ಶ್ರೀಮಾತೆ''ಯು ಬೇಂದ್ರೆಯವರ ಪರಿಕಲ್ಪನೆಯ ಮೇರೆಗೆ ''ಮಾತುಗಳ ಮಾತೆ'', ''ಉಸಿರುಗಳ ಉಸಿರು!'' ಈ ಮಾತೆಯ ಮಾತು ಹೂತು ಕಾವ್ಯ ಕುಸುಮಗಳು ಅರಳಬೇಕು ಎಂಬ ಬಯಕೆ ಹಾಗೂ ಈ ಉಸಿರು ಹಸಿರಾಗಿ ಕಾವ್ಯಧಾರೆಯಲ್ಲಿ ಹರಿಯಬೇಕೆಂಬ ಇಚ್ಛೆ ಇಲ್ಲಿಯ ಪ್ರಾರ್ಥನೆಯಾಗಿದೆ. ಬೇಂದ್ರೆಯವರ ದೃಷ್ಟಿಯಲ್ಲಿ ''ಶ್ರೀಮಾತೆ''ಯೇ 'ಕಣ್ಣುಗಳ ಬಣ್ಣ', 'ಕಿವಿಗಳ ಕಿವಿ', ಅಷ್ಟೇ ಅಲ್ಲ ಆ ಮಾತೆಯೇ ಜಗವುಕೂಡ. ಈ ಪಾರ್ಥನೆಯ ಕೊನೆ ಎರಡು ಸಾಲು ಹೀಗಿದೆ-

''ಜೀವದೊಳು ದೇವಿ ನೀನುಽ
ನೀನಗ್ನಿ, ಸೋಮ ನೀ, ಭಾನು ನೀನು.''

'ಶ್ರೀಮಾತೆ'ಯ ಜೀವದೊಳಗಿನ ದೇವಿಯಾಗಿ, ಪ್ರಕೃತಿಯಲ್ಲಿ ದಿವ್ಯಾಗ್ನಿ ಸ್ವರೂಪಳಾದ ಅಗ್ನಿ-ಸೋಮ-ಭಾನು ರೂಪು ತಾಳುತ್ತಾಳೆ. ಬೇಂದ್ರೆಯವರಿಗೆ 'ಶ್ರೀಮಾತೆ'ಯು ಸರ್ವಸ್ವ ಈ

ಅರ್ಪಣಾಭಾವವು ಇಲ್ಲಿ ಬೆಳಗಿದೆ.

"ಬರುವಳು ಬರುವಳು" ಈ ಕವನವು ಭಾವ ಸಂದರ್ಭದಲ್ಲಿ ವಿವರಿಸಿರುವಂತೆ "ದಿ ಮದರ್ ಅವರ ದರ್ಶನಕ್ಕಾಗಿ ನಿರೀಕ್ಷೆಯಲ್ಲಿದ್ದಾಗ ಪ್ರದೀಪ್ತವಾದ ಭಾವ ಚಿತ್ರ. ದಿ ಮದರ್ "ಬರುವಳು ಬರುವಳು ಬಂದೇ ಬರುವಳು" ಎಂಬ ಅಚಲ ವಿಶ್ವಾಸದಿಂದ ನಿರೀಕ್ಷೆಯಲ್ಲಿದ್ದ ಭಕ್ತರಿಗೆ ಖಂಡಿತವಾಗಿಯೂ ದರ್ಶನವನ್ನು ಕೊಟ್ಟೇ ಕೊಡುವಳು ಎಂದು ಹೇಳುವುದರೊಡನೆ, ಆ ತಾಯಿಯ ಹಸನ್ಮುಖವು ತಾರೆಗಳಾಚೆಯ ನೀಲಿಮೆಯಂತೆ ಇದ್ದು, ಬೆಳ್ಳಿಯ ಕಿರಣಗಳನ್ನೇರಿ, ಹೊನ್ನಿನ ಹಡಗವ ಸೇರುವಳು ಎಂದು ಬಣ್ಣಿಸುತ್ತಾ, ಕೊನೆಯ ನುಡಿಯಲ್ಲಿ ಆ ತಾಯಿಯ ತೇಜಃಪುಂಜವು ಕಿರಳಿ ನಕ್ಷತ್ರವನ್ನೆ ಉಗುಳುವಳು ಎಂಬ ಚಿತ್ರವನ್ನು ಚಿತ್ರಿಸುತ್ತಾರೆ. ಇಲ್ಲಿ ಮಾತೆ, ಪ್ರಕಾಶವಾಗಿ ವಿಶ್ವವವನ್ನು ಬೆಳಗುವ ಶಕ್ತಿಯಾಗಿ ಬಂದೇ ಬರುವಳು ಎಂಬ ಪ್ರತೀಕ್ಷೆ ಪ್ರತಿಬಿಂಬಿತವಾಗಿದೆ.

"ಪಾದ ಪದ್ಮಕೆ ಪ್ರಾರ್ಥನೆ" ಈ ಕವನವು ತಾಯಿಯ ಪಾದಕ್ಕೆ ಮಾಡಿದ ವಂದನೆ. ಇದು ಪ್ರಾರ್ಥನಾಷ್ಟಕ. ಮಣಿದರೆ ಶ್ರೀಮಾತೆಗೆ ಮಾತ್ರ ಮಣಿಯುತ್ತೇನೆ ಎಂಬ ಸರ್ವಾರ್ಪಣಭಾವದ ಪ್ರತೀಕ ಈ ಅಷ್ಟಕ

"..........................................

..........................................

ಬೇರೆ ಏತಕು ಮಣಿಯೆ ನಾ ಇಗೊ ಬಂತು ತಿಳಿವಿನ ಗಳಿಗೆ.

ಮಣಿಹವೆಂದೇ ಮಣಿವೆನಮ್ಮನ ಪಾದಪದ್ಮಂಗಳಿಗೆ."

ಎಂದು ಪ್ರಾರಂಭವಾಗುವ ಪ್ರಾರ್ಥನೆಯು "ಬೆಣ್ಣೆ ಹಾಲಲಿ ಏಳುವಂದದಿ ನಿನ್ನಾ ಬಳಿಗೆ" ಎಂಬ ರೂಪಕಗಳ ಮೂಲಕ ಸಾಗುತ್ತದೆ. ಈ "ಅಷ್ಟಕಬಂಧ" (ಎಂಟು ನುಡಿಗಳ ಪ್ರಾರ್ಥನೆ) ಕಷ್ಟವ ನಷ್ಟಗೊಳಿಸಲಿ ತಾಯಿ ಎಂಬ ಬೇಡಿಕೆಯನ್ನು ಒಳಗೊಂಡಿದೆ.

ಈ ಅಷ್ಟಕದಲ್ಲಿ ಪ್ರಮುಖವಾಗಿ ಕಾಣುವ ಅಂಶಗಳೆಂದರೆ ಕತ್ತಲು ಅಳಿಯಬೇಕು, ಬೆಳಕು ಬೆಳಗಬೇಕು, ಸರ್ವಸ್ವವನು ನೀಡುವ ಬೆಂಕಿ ಹೊತ್ತಿಸಬೇಕು, ಕತ್ತಲೆಯ ಹಂದರಕೆ ಹಬ್ಬದೆ ಬಿತ್ತು-ಬೆಳಕೇ ಬೆಳೆಯಬೇಕು ಎಂಬುದು. ಈ ಪ್ರಾರ್ಥನಾಷ್ಟಕದ ಕೊನೆಯ ನುಡಿ ಹೀಗಿದೆ :

"ಒಂದೆ ಅಷ್ಟಕ ಬಂಧ ಕಷ್ಟವ ನಷ್ಟಗೊಳಿಸಲಿ ತಾಯಿ,

ಬಯಕೆ ಸಿಂಪಿಯು ಹುಳವು ಬಿಡುತಿದೆ ಸ್ವಾತಿಗಾಗಿಯೆ ಬಾಯಿ.

ತುತ್ತು ಮುತ್ತನು ನೀಡು ಸರಸತಿ ಲಕುಮಿ ಕಾಳಿಕೆ ಅಂಬೆ

ಪಾದಪದ್ಮಂಗಳಿಗೆ ಜೀವದ ಹಂಸನಾ ಬಲಗೊಂಬೆ."

ಇಲ್ಲಿ ತಾಯಿಯು ಸರಸ್ವತಿ, ಲಕುಮಿ, ಕಾಳಿಕಾ, ಅಂಬೆ-ಎಲ್ಲರೂ ಆಗುತ್ತಾಳೆ. ಅಂಥ ತಾಯಿಯ ಪಾದಪದ್ಮಂಗಳಿಗೆ ನಮಿಸುತ್ತಾ ಮಾಡಿದ ಪ್ರಾರ್ಥನೆಯೆಂದರೆ- ಸ್ವಾತಿಯ ಹನಿಗಾಗಿ ಸಿಂಪಿ ಬಾಯಿ ಬಿಡುವ ಹಾಗೆ, ಅಂಬಿಕಾತನಯದತ್ತನು ಬಾಯಿ ಬಿಡುತ್ತಾ, ತುತ್ತು ಮುತ್ತನು ನೀಡು" ಎಂಬ ಬಯಕೆಯನ್ನು ಪ್ರಕಟಿಸುತ್ತಾನೆ. "ಜೀವದ ತಳಿ" ಚಿತ್ತಮಂದಿರದಲಿ ಹೊತ್ತಲಿ ಎಂದು ಪ್ರಾರ್ಥಿಸುತ್ತಾನೆ. ಕತ್ತಲಲ್ಲಿ ಸುಳಿದಾಡುವವರಿಗೆ ಬೆಳಕು ಕಾಣಲಿ ಎಂಬ ಹೆಬ್ಬಯಕೆ ಇಲ್ಲಿದೆ.

ಪ್ರಕಾಶರೂಪದ ಜನನಿಯ ಪಾತ್ರವನ್ನು ಹಾಗೂ ಕಷ್ಟ, ನಷ್ಟ ಗೊಳಿಸುವ ಶಕ್ತಿಯ ಸ್ವರೂಪವನ್ನು ತಾಳುತ್ತಾಳೆ ತಾಯಿ.

''ಅದಿತಿ'' ಈ ಕವನ ಅತ್ಯಂತ ಮಾರ್ಮಿಕವಾದ ಕವನ. ಒಂದನ್ನು ಹಲವೊಂದಾಗಿ ತುಂಡರಿಸಿ, ಪಾಖಂಡವಾಗಿ ಬಿತ್ತರಿಸುವದು ದಿತಿಯ ಭಾವ. ಇದು ದೈತ್ಯಮಾರ್ಗ. ಈ ದಿತಿಯ ಭಾವವನ್ನು ಸಂಹರಿಸಲು ಅದಿತಿಯ ಆಗಮನವಾಗಬೇಕೆಂಬ ಅಭೀಪ್ಸೆಯನ್ನು ವ್ಯಕ್ತಪಡಿಸುವ ಕವನ ಇದು. ಅಂಬಿಕಾತನಯದತ್ತರು ''ಅದಿತಿ''ಯನ್ನು ಹೀಗೆಂದು ಆಮಂತ್ರಿಸುತ್ತಿದ್ದಾರೆ :

''ಬಾರೆ ಭಗವತಿ ನಮ್ಮ ಜಗವತಿ ಕಾತರಿಸುತಿಹುದು
ನಿನ್ನನ್ನೇ ನೆನೆನೆನೆದು ಜೀವವು ಚೀತರಿಸುತಿಹುದು''

ಅದಿತಿಯನ್ನು ಬಣ್ಣಿಸುವ ಬಗೆ ಅತ್ಯುಚಿತವಾಗಿದೆ.

''ಇವಳು ರುದ್ರರ ತಾಯಿ, ವಸುಗಳ ಮನೆಯ ಮಗಳೀಕೆ.
ತಂಗಿ ಆದಿತ್ಯರಿಗೆ. ಇವಳಮೃತಕ್ಕೆ ಬಸಿರೀಕೆ.
ದಿವ್ಯಜನ್ಮದ ಮಂತ್ರಜಾತದ ದೈವದುಸಿರೀಕೆ.
ಎಲ್ಲರಿಗು ಅವರಾಕೆ, ಅರಳುವ ಹವಣು ಹಗಲೀಕೆ!''

ಇಲ್ಲಿಯ ಪ್ರಾರ್ಥನೆ - ''ನಮ್ಮನೀಶತೆ ಹರಿದು ಓಡಲಿ, ಮಾಡು ಈಶರನು'' - ಎಂದಿದೆ. ನಮ್ಮ ಅಸಮರ್ಥತೆ ಗುಲಾಮಗಿರಿಯನ್ನು ಬಡಿದು ಓಡಿಸಿ, ನಮ್ಮನ್ನು ಈಶರನ್ನಾಗಿ, ಅಂದರೆ ಸಮರ್ಥರನ್ನಾಗಿ, ಒಡೆಯರನ್ನಾಗಿ ಮಾಡಲಿ ಎಂಬ ಯಾಚನೆಯಿದೆ. ವರಕವಿಯ ಇಂಗಿತ ಈ ಕೆಳಗಿನ ನುಡಿಯಲ್ಲಿ ಅಂತರ್ಗತವಾಗಿದೆ :

''ಶರಣು ಭಕ್ತಿಗೆ, ಶರಣು ಯುಕ್ತಿಗೆ, ಶರಣು ಪರಮುಕ್ತಿ!
ತೊರೆದು ವಿಷಯಾಸಕ್ತಿ ತೋರಿ ವಿರಕ್ತಿ ಪರಭುಕ್ತಿ
ಹೊಳೆದು ನಮ್ಮನು ತೊಳೆದು ನಾಡಿಗೆ, ಇಳೆಗೆ ಇಡಿ ಇಳೆಗೆ
ಇಳಿದು ಬಾ, ಎಬ್ಬಿಸಲು ಬಾ, ದಿವ್ಯತೆಯೆ ಬೆಳೆ ಬೆಳೆಗೆ.''

ಅಂಬಿಕಾತನಯದತ್ತನು ''ಗಂಗಾವತರಣ''ದಲ್ಲಿ ಗಂಗೆಯನ್ನು ''ಇಳಿದು ಬಾ ತಾಯಿ ಇಳಿದು ಬಾ'' ಎಂದು ಕರೆಯುತ್ತಾ ''ಸತ್ತ ಜನರನ್ನು ಎತ್ತ ಬಾ' ಎಂದು ಬೇಡುತ್ತಾ-

''ಹರಣ ಹೊಸದಾಗೆ ಹೊಳೆದು ಬಾ
ಬಾಳು ಬೆಳಕಾಗೆ ಬೆಳೆದು ಬಾ
ಕೈ ತೊಳೆದು ಬಾ
ಮೈ ತಳೆದು ಬಾ
ಇಳೆಗಿಳಿದು ಬಾ ತಾಯೀ
ಇಳಿದು ಬಾ ತಾಯಿ
ಇಳಿದು ಬಾ''

ಎಂಬ ಪ್ರಾರ್ಥನೆಯನ್ನು ಮಾಡಿದ ಹಾಗೆಯೇ ಅಂಬಿಕಾತನಯದತ್ತರು ''ಅದಿತಿ''ಯನ್ನು

ಕೂಡ "ಹೊಳೆದು ನಮ್ಮನ್ನು, ತೊಳೆದು ನಾಡಿಗೆ, ಇಳೆಗೆ ಇಡಿ ಇಳೆಗೆ, ಇಳಿದು ಬಾ ಎಬ್ಬಿಸಲು ಬಾ, ದಿವ್ಯತೆಯ ಬೆಳೆ ಬೆಳೆಗೆ" ಎಂದು ಕರೆದಿದ್ದಾರೆ. ಎರಡು ಕವನಗಳಲ್ಲಿಯ ಸಾಮ್ಯವನ್ನು ಗುರುತಿಸುತ್ತಿದ್ದಂತೆಯೇ "ಅದಿತಿ" ಕವನದಲ್ಲಿಯ ವಿಶೇಷತೆಯನ್ನು ಗಮನಿಸದೇ ಇರಲಾರೆವು. ಅದಿತಿಯು ಇಳೆಗೆ, ಇಡೀ ಇಳೆಗೆ ಇಳಿದು ಬಂದು "ದಿವ್ಯತೆಯ ಬೆಳೆ ಬೆಳೆಗೆ" ಬಾ ಎಂದು ವಿಶೇಷವಾಗಿ ಆಮಂತ್ರಿಸುತ್ತಾರೆ. ಈಕೆಯನ್ನು "ದಿವ್ಯ ಜನ್ಮದ ಮಂತ್ರಜಾತದ ದೈವದುಸಿರು" ಎಂದು ಬಣ್ಣಿಸುತ್ತಾರೆ. ಬೇಂದ್ರೆ ಕರೆದ ಗಂಗೆ-ಅದಿತಿಯ ಪ್ರಸಾದವಾದ ಸಾವಿತ್ರಿ!

"ಓ ತಾಯಿ-ಮಾಯಿ!" ಇದು ಕವಿಯ ಕನಸಿನ ಸಂಚಾರಗಳಲ್ಲಿ ತನ್ನ ಸ್ಥಾಯಿಯೇ ಚ್ಯುತಿಗೊಳ್ಳುವದೋ ಎಂಬ ಭಯ ವಿಹ್ವಲ ವಾತ್ಸಲ್ಯಭಾವದಲ್ಲಿ ಬಂದ ಲಾವಣ್ಯ ಲಹರಿ. ಈ ಕವನದಲ್ಲಿಯ ವೈಶಿಷ್ಟ್ಯ 'ನಾಯಿ' ಪದದ ಬಳಕೆ

"ಓ ತಾಯಿ, ಮಾಯಿ, ಶಿವಜಾಯಿ, ಕಾಯಿ ನನ! ಯಾಕ ತೆರೆವೆ ಬಾಯಿಽ ?
ಯಾ ಹಾದಿಲಿಂದ ನಾ ಹೋದರೇನು, ಆಗ್ತೇನ ಅಲ್ಲೆ ನಾಯಿ."

- ನುಡಿ-೧

"ಓ ಮಾಯಿ ಬಂದೆ, ಓ ತಾಯಿ ಬಂದೆ, ಓ ಕಾಯೆ ಕಾಯಿ ಬಂದೆ.
ನಿನ ಕಾಲ ನಾತ ಮೂಸಿಡುತ ಬಂದೆ'. ನಿನ ನಾಯಿಯಾಗಿ ಬಂದೆ."

- ನುಡಿ-೧೨

'ನಾಯಿ' - ಅತ್ಯಂತ ಪ್ರಾಮಾಣಿಕ. ಪ್ರೀತಿ, ವಾತ್ಸಲ್ಯದ ಸ್ವಾಮಿಭಕ್ತಿಯ ಸಾಂಕೇತಿಕ ರೂಪಕ! 'ತಾಯಿ' ಎಲ್ಲಿ ಹೋದರೂ 'ನಾಯಿ' ಅವಳ ಬೆಂಬತ್ತಿ ಹೋಗುವಂತೆ. ತಾಯಿ ಕಾಲನಾತವನು ಮೂಸುತ್ತಾ ಹಿಂಬಾಲಿಸುವ ಕೂಸು ಎಂಬ ಮಹತ್ತರ ರೂಪಕ ಇದಾಗಿದೆ. ತಾಯಿ-ಕಂದ ಇವರ ನಡುವಣ ಬಂಧ-ಅನುಬಂಧ ಅವರ್ಣನೀಯ. ಈ ಬಂಧಾನುಬಂಧವನ್ನು ನವೀನ ರೀತಿಯಲ್ಲಿ ಇಲ್ಲಿ ಬಣ್ಣಿಸಲಾಗಿದೆ. ತಾಯಿಯ ತವಕ, ತಳಮಳ, ಕಾತುರ ಅತ್ಯಂತ ರಮಣೀಯವಾಗಿ ಇಲ್ಲಿ ಚಿತ್ರಿಸಲಾಗಿದೆ. ಈ ಕೆಳಗಿನ ಕೆಲ ನುಡಿಗಳನ್ನು ವೀಕ್ಷಿಸೋಣ.

"ಪ್ರತಿರೋಮಕೂಪದಾಗ ಕಾಮ ತುಂಬಿ, ತುಳಕ್ಯಾಡತಽದ ಇಲ್ಲಿ
ನೀ ಜಪ್ಪಿಸಿರಲು, ನಿನ ತಪ್ಪಿಸ್ಯಾರೆ ನಾ, ಹೋಗಬಲ್ಲೆನೆಲ್ಲಿ?"

- ನುಡಿ-೨

"ತೆರದೇನಿ ಯೋಗ, ನಿನ ಹೃದಯದಾಗ, ಬರಲೊಲ್ಲ್ಯೊ ಬ್ಯಾಗ ಒಳಗ,
ಈ ಕಲಕುಮಲಕು ಆದಾಗ ನಿನಗ, ನಡದಽದ ಮ್ಯಾಲ ಕೆಳಗ."

- ನುಡಿ-೪

"ಬಂದಾನ ಏನ ನನ ಕಂದ ಮನಿಗೆ, ಇಂದಾರೆ ಅನತ ಮನಕ
ಎಂದಾರೆ ಬಾರೊ, ಕಾದಿರುವೆ ಇಲ್ಲೆ, ನೀನಾಗಿ ಬರುವ ತನಕ."

- ನುಡಿ-೫

"ಅಡ್ಡಡ್ಡ ಹಾದಿ ನೀ ಹೋದ ಮ್ಯಾಲೆ, ನಾ ಕಾದೆನೆಷ್ಟೊ ನಿನಗಽ
ಹಾಲ್ ಹಸಿವು ಹುಟ್ಟಿದಾಗ, ನೀನಽ ಬರತಿಯೋ ಚಿಂತಿ ಯಾಕ ನನಗಽ ?"

- ನುಡಿ-೬

"ನಾಡಾಡಿ ಹಕ್ಕಿ ನೀನಲ್ಲೊ ಮಗನ, ಹೊಕ್ಕ್ಯಾಕ ಬೆಳ್ಳಕ್ಕ್ಯಾಗs ?
ನಿನ ತಾಯಿ ಕಣ್-ಹನೀಮುತ್ತ ಸುರಸತಾಳ, ಮಾನsಸ ಕೊಳ್ಳದಾಗ."

- ನುಡಿ-೧೦

ತಾಯಿಯ ಮಮತೆಯ ಕಾಳಜಿ ಹೇಗೆ ಮನತುಂಬಿ ಉಕ್ಕಿ ಹರಿಯುತ್ತದೆ ಎಂಬುದಕ್ಕೆ ಸಾಕ್ಷಿಯಾಗಿದೆ ಈ ಕವನದ ಮೇಲಿನ ನುಡಿಗಳು.

ಈ ಕವನದ ಮುಕ್ತಾಯದ ನುಡಿ ಹೀಗಿದೆ :

"ಓ ತಾಯಿ ಬಂದೆ, ಮಾಮಾಯಿ ಅಂದೆ, ಈ ಬಾಯಿ ತುಂಬು ಒಂದೇ
ಮಕರಂದ ಪಾನದಾ ಝುರೀ
ತೆರಿತೆರೀ ನಿನ್ನ ತಾವರೀ
ಬಂದsದ ತುಂಬಿಯಾ ಮರೀ."

- ನುಡಿ-೧೬

ಇದು ಮುದ್ರಿಕೆಯ ಕವನ ಎಂಬ ಕಾರಣಕ್ಕೆ ಈ ಕವನಕ್ಕೆ ವಿಶೇಷ ಮಹತ್ವವಿದೆ. ಈ ಕವನವು "ಅಂಬಿಕಾತನಯನ ನುಡಿ"ಯಾಗಿದ್ದು ಅದು "ನುಡಿತಾವ ತೆರೀ ತೆರೀ ಎಂದೇ". ಅಂತೆಯೇ ಇಲ್ಲಿಯ ಪ್ರಾರ್ಥನೆ "ಈ ಬಾಯಿ ತುಂಬು ಒಂದೇ" ಎಂದು. ಅಂಬಿಕಾತನಯದತ್ತ "ತುಂಬಿಯಾ ಮರೀ"- ಬಂದsದ, ತಾಯಿ ನಿನ್ನ ತಾವರಿಯನ್ನು ತೆರೀ ತೆರೀ, ಮಕರಂದ ಪಾನದಾ ಝುರೀ" ಎಂದು.

"ಪ್ರತ್ಯಕ್ಷ" ಈ ಕವನವು "ಮನೋನ್ಮನಿ"ಗೆ ಸಲ್ಲಿಸಿದ ಪ್ರಾರ್ಥನೆಯಾಗಿದೆ. ಈ ಕವನಕ್ಕೆಂದೇ ವರಕವಿ ಬೇಂದ್ರೆ "ಮುನ್ನುಡಿ"ಬರೆದಿದ್ದಾರೆ. ಈ ಮುನ್ನುಡಿ, ಈ ಕವನದ ಅಂತರ್ಯವನ್ನು ಪ್ರಕಟಪಡಿಸುತ್ತದೆ. "ಪ್ರತಿ+ಅಕ್ಷ=ಪ್ರತ್ಯಕ್ಷ, ಅಂದರೆ, ಕಣ್ಣಿಗೆ ಇದಿರಾಗಿ ವಸ್ತುವಾಗಿ ಕಾಣುವುದು- ಕಣ್ಣಿಗೆ ಪ್ರತ್ಯಕ್ಷ.......................ಒಂದು ದ್ವಂದ್ವ-ಸಂಧಿ ಪ್ರಕಾಶದಲ್ಲಿ ತನ್ನ ವಿಷಯಜ್ಞಾನವಾಗುತ್ತಿದೆ. ಎರಡು ಕಣ್ಣಿಗೆ ಕಾಣುವ ವಸ್ತು ಒಂದು. ಎರಡು ಕಿವಿಗೆ ಕೇಳಿಸುವ ಶಬ್ದ ಒಂದು. ಅವುಗಳಿಗೆ ದ್ವಿಧಾವೃತ್ತಿಯಿಲ್ಲ. ಮೂಲತಃ ಆದರೆ, ಇಂದ್ರಿಯಾರ್ಥಗಳಂತೆಯೇ ಅಂತಃಕರಣಾರ್ಥಗಳೂ, ಕತ್ತಲೆ-ಬೆಳಕಿನ ಸಂತಾನ. ಕತ್ತಲೆ ಬೆರೆಯದೆ ಬೆಳಕಲ್ಲ ಅದು. ಶುದ್ಧ ಚಿತ್ತಕ್ಕೆಯೆ ಶುದ್ಧ ಸತ್ತ್ವದ ಪ್ರಕಾಶ ತೆರೆಯುವುದು. ಈ ಪ್ರಕಾಶದ ಪ್ರಭುವಾಗಬೇಕಾದರೆ ಸತ್ತ್ವವನ್ನೂ ಅರಲಿನಂತೆ ಮಿದ್ದಿ ಮೂರ್ತಿ ಮಾಡಬಹುದಾದ ತತ್ತ್ವದ ಜಾಗೃತಿ ಬೇಕು" ಎಂದು ಈ ಮುನ್ನುಡಿಯಲ್ಲಿ ಹೇಳಲಾಗಿದೆ. ಅಂದರೆ ಪ್ರಕಾಶದ ಪ್ರಭುವಾಗಲು ಸತ್ತ್ವವನ್ನು ಅರಲಿನಂತೆ ಮಿದ್ದಿ ಮಿದ್ದಿ ಹದಮಾಡಬೇಕು, ತತ್ತ್ವದ ಜಾಗೃತಿಯನ್ನು ಪಡೆದುಕೊಳ್ಳಬೇಕು. ಆಗ ಪ್ರಕಾಶದ ಮೇಲೆ ಪ್ರಭುತ್ವ ಲಭ್ಯವಾಗುತ್ತದೆ. ಅಂತೆಯೇ ಬೇಂದ್ರೆ ಹೇಳುತ್ತಾರೆ :

"ಹುರುಳಿನ ಅರಳರಳಿಸಿs
ಮಾಲೆ ಮಾಡಿ ಕೊರಳಿಸಿs
ಹೃದಯವೀಣೆ ಬೆರಳಿಸಿs
ಕುಣಿಸು ಜಗಕಲಾಪಿನೀ
ಬಾರೆ ಬಾ ಮನೋನ್ಮನೀ"

ಹುರಳನ್ನು, ಅಂದರೆ ತತ್ತ್ವವನ್ನು ಅರಳಿಸಿ, ಅರಳಿಸಿ, ಅದರ ಮಾಲೆಯನ್ನು ಮಾಡಿ, ಅದನ್ನು ಕೊರಳಿಸಿ, ಅಂದರೆ ಅದಕ್ಕೆ ಧ್ವನಿಯನ್ನಿತ್ತು ಹೃದಯ ವೀಣೆಯನ್ನು ಬೆರಳಿಸಿ, ಅಂದರೆ ನುಡಿಸಿದಾಗ, ಆ ರಾಗಕ್ಕೆ ಅನುರಾಗದಿಂದ ಜಗದ ನವಿಲು ಕುಣಿಯುತ್ತದೆ. ಇದು ಬೆಳಗಿನ ಆನಂದದ ಶೃಂಗಾರಲಾಸ್ಯ.

ಇದೇ ಕವನದ ಮೂರನೆಯ ನುಡಿಯಲ್ಲಿ ಹೀಗಿದೆ :

"ಒಲವು ಬಳ್ಳಿಯಾಗಿರೆS
ಜೀವ ಅತ್ತ ಬಾಗಿರೆS
ನಿನ್ನ ಪಾದ ತಾಗಿರೆS
ತುಂಬು ವಿಶ್ವವಾಹಿನೀ
ಬಾರೆ ಬಾ ಮನೋನ್ಮನೀ."

ಇಲ್ಲಿ ಬೇಂದ್ರೆಯವರು ಒಲವಿನ ಸಿದ್ಧಾಂತವನ್ನು ಪ್ರತಿಪಾದಿಸುತ್ತಾರೆ. ಅವರು "ಒಲವು ಲಿಂಗ"ದ ಆರಾಧಕರು; "ಒಲವೆ ನಮ್ಮ ಬದುಕು" ಎಂಬ ಜೀವನ ಸೂತ್ರವನ್ನು ನೀಡಿದವರು. ಇಲ್ಲಿ ಅವರು ಒಲವನ್ನು ಬಳ್ಳಿಗೆ ಹೋಲಿಸಿ, ಜೀವವು ಅತ್ತ ಬಾಗಿದಾಗ, ಆ ಒಲವಿನಿಂದ ಮನೋನ್ಮನಿಯ ಪಾದ ತಾಗಿದಾಗ, ವಿಶ್ವವಾಹಿನಿ ತುಂಬುತ್ತದೆ, ಎಂಬ ಒಲವಿನ ಸಂದೇಶವನ್ನು ನೀಡುತ್ತಾರೆ.

ಈ ಕವನದಲ್ಲಿ "ದೇವ-ದ್ವೀಪಿನಿ" ಬರಲಿ, ಬಾಳಿನ ಪಯಣ ನೆಮ್ಮದಿಯಾಗಿ ಸಾಗಲಿ, ಎಂದು ಬಯಸುತ್ತಾ ಈ ರೀತಿಯಾಗಿ ಇದನ್ನು ಮುಕ್ತಾಯಗೊಳಿಸುತ್ತಾರೆ :

"ಒಕ್ಕೊರಲಿನ ಗೀತಿಗೆS
ಪ್ರೇರಕವಿಹ ರೀತಿಗೆS
ಜೀವನದೀ ನೀತಿಗೆ
ಸ್ವಚ್ಛಂದವಿಧಾಯಿನೀ
ಬಾರೆ ಬಾ ಮನೋನ್ಮನೀ."

ಇದು ಬೇಂದ್ರೆಯವರ ತಾತ್ತ್ವಿಕ ನಿಲುವಿನ ಒಕ್ಕೊರಲಿನ ಗೀತೆಯಾಗಿದ್ದು; ಇದು ಪ್ರೇರಕವಾಗಿ, ಜೀವನದ ನೀತಿಯಾಗಿ ರೂಪುಗೊಳ್ಳುವಂತಾಗಬೇಕೆಂಬ "ಪ್ರತ್ಯಕ್ಷ" ಪ್ರಮಾಣ ಇದಾಗಿದೆ.

"ದರ್ಶನ" ಈ ಕವನವು ಶ್ರೀಮಾತೆಯವರ ದರ್ಶನ ಆಕಾಂಕ್ಷಿಗಳ ಮನಸ್ಥಿತಿ ಹಾಗೂ ಅಪೇಕ್ಷೆಗಳನ್ನು ಚಿತ್ರಿಸುತ್ತದೆ. ಈ ಕವನದ ಈ ಕೆಳಗಿನ ನುಡಿ ಬಹಳ ಮಾರ್ಮಿಕವಾಗಿದೆ :

"ಜನ್ಮ ಜನ್ಮದ ಸುಕೃತವೇ ಬಾ
ನನಗೆ ಬೆಂಬಲವಾಗುತ ;
ಜನ್ಮ ಜನ್ಮದ ದುಷ್ಕೃತವೆ ಬಾ
ಮಾತೃಚರಣಕೆ ಬಾಗುತ."

ಇಲ್ಲಿ "ಜನ್ಮ ಜನ್ಮದ ಸುಕೃತ" ಬೆಂಬಲಕ್ಕೆ ಬರಬೇಕೆಂದು ನುಡಿಯುವಾಗ "ಜನ್ಮ ಜನ್ಮದ

ದುಷ್ಕೃತ''ವನ್ನು ಕರೆದು, ಅದು ''ಮಾತೃ ಚರಣಕೆ ಬಾಗುತ'' ಎಂಬ ಆದೇಶ ನೀಡಲಾಗಿದೆ. ಅಂದರೆ ದುಷ್ಕೃತಿ ಮಾತೆಗೆ ಶರಣಾಗಬೇಕು ಎಂಬ ಆದೇಶ.

ಶ್ರೀಮಾತೆಯ ದರ್ಶನ ಭಾಗ್ಯದಿಂದ ದೊರೆಯುವುದೇನು ಎಂಬುದನ್ನು ಕೆಳಗಿನ ನುಡಿಯಲ್ಲಿ ಬಣ್ಣಿಸಲಾಗಿದೆ :

''ಯುಗಯುಗದ ವಾತ್ಸಲ್ಯವೇ ಬಾ
ಹೊಮ್ಮಿ ಹೊನಲಲಿ ಹರಿಯುತ;
ದೈವಗರ್ಭದ ಕೃಪೆಯೆ ಬಾ ಬಾ
ಕರೆದು ಅಮೃತವ ಕರೆಯುತ.''

ಯುಗಯುಗದ ವಾತ್ಸಲ್ಯವು ಪ್ರವಾಹೋಪಾದಿಯಲ್ಲಿ ಹರಿದು ಬರಲಿ, ದೈವಗರ್ಭದ ಕೃಪೆಯು ಅಮೃತವ ಕರೆಯುತ ಬರಲಿ ಎಂದು ಅಪೇಕ್ಷಿಸುವುದು, ದರ್ಶನಾಕಾಂಕ್ಷಿಗಳ ಹೃದಯ ನೈರ್ಮಲ್ಯದ ಸಂಕೇತವಾಗಿದೆ. ಅಂತೆಯೇ ರಣಘೋಷ ಮತ್ತು ಆಕ್ರೋಶಗಳಿಂದ ಬೇಸತ್ತು, ಶ್ರೀಮಾತೆಯ ದರ್ಶನವನ್ನು ಪಡೆದು, ಜೀವನದಲ್ಲಿ ಶಾಂತಿಯನ್ನು, ಅಮೃತತ್ವವನ್ನು ಪಡೆಯಲಿಚ್ಛಿಸಿರುವುದನ್ನು ಇಲ್ಲಿ ಬಿಂಬಿಸಲಾಗಿದೆ :

''ರಣಘೋಷಕೆ
ಆಕ್ರೋಶಕೆ
ಬೇಸತ್ತೆವು ಇಂದು.
ಬಾ ತಾಯಿಯೆ ಬಾರಾ
ಚಂದಿರಮುಖಿ ತೋರಾ''

ಎಂದು ಬೇಡುತ್ತಾರೆ.

''ತಾಯಿಗೆ ಪ್ರಾರ್ಥನೆ'' ಈ ಕವನವು ಮಾತೃ=ತಾಯಿತತ್ತ್ವದ ಮೂರ್ತಿವೆತ್ತಂತಿದೆ ಎಂದರೆ ಅದರಲ್ಲಿ ಯಾವ ಅಚ್ಚರಿಯೂ ಇಲ್ಲ. ಈ ಕವನದ ಪ್ರಾರಂಭವೇ ಅತ್ಯಂತ ಮಾರ್ಮಿಕವಾಗಿದೆ :

''ಒಮ್ಮಿದ್ದೆ ನೀನು, ಈಗಿಲ್ಲವೆಂದು ಹೇಗೆನಲಿ ತಾಯಿ ನಿನಗೆ?
ನೀನಿದ್ದರಿರುವೆ, ಇಲ್ಲದರೊಳಿಲ್ಲ, ಹೀಗೆನುವೆ ನಾನೆ ನನಗೆ
ನಿನ್ನಿಂದ ಬಂದೆ, ನಿನ್ನಲ್ಲಿ ಬೆಳೆವೆ , ನಿನ್ನೊಳಗೆ ಸಾಗುವಂತೆ
ತಾ ಹೊತ್ತಲೆಂದು ಬಂದಂಥ ಬತ್ತಿ ದೀಪಕ್ಕೆ ಬಾಗುವಂತೆ.''

ತಾಯಿಯ ಅಮರತ್ವವನ್ನು ಎಷ್ಟೊಂದು ಸರಳವಾದ ನುಡಿಗಳಲ್ಲಿ ಸಾದರಪಡಿಸಿದ್ದಾರೆ ಅಂಬಿಕಾತನಯದತ್ತರು! ''ಒಮ್ಮಿದ್ದೆ ನೀನು, ಈಗಿಲ್ಲವೆಂದು ಹೇಗೆನಲಿ ತಾಯಿ ನಿನಗೆ?'' ತಾಯಿ ತನ್ನ ತನಯನಲ್ಲಿ ಚಿರಂತನವಾಗಿರುತ್ತಾಳೆ. ಹೀಗಾದಾಗ ಒಮ್ಮೆ ಇದ್ದ ತಾಯಿ, ಈಗ ಇಲ್ಲ ಎಂದು ಹೇಳಲು ಹೇಗಾದೀತು? ತಾಯಿಯ ಅಮರತ್ವವನ್ನು ಇದಕ್ಕೂ ಪ್ರಭಾವಿಯಾಗಿ, ಪರಿಣಾಮಕಾರಿಯಾಗಿ ಬಣ್ಣಿಸಲು ಅಸಾಧ್ಯ ಎಂದೇ ಹೇಳಬೇಕು. ತಾಯಿ ಇದ್ದರೆ ತನಯ. ತಾಯಿಯಲ್ಲದ್ದಿರೆ ತನಯನಿಲ್ಲ. ತಾಯಿಯಿಂದಲೇ ತನಯನ ಜನನ, ಬಾಳು, ಬೆಳಗು ಎಲ್ಲವೂ. ಅಂತೆಯೇ ತಾಯಿ-ತನಯರ ಸಂಬಂಧವನ್ನು ಬಣ್ಣಿಸಲು ''ತಾ ಹೊತ್ತಲೆಂದು ಬಂದಂಥ ಬತ್ತಿ ದೀಪಕ್ಕೆ ಬಾಗುವಂತೆ' ಎಂಬ ರೂಪಕವನ್ನು ಬಳಸಿದ್ದಾರೆ. ಜ್ಯೋತಿರ್ಮಯಿ ತಾಯಿ ಅಮರ ಪ್ರಕಾಶವಲ್ಲವೇ?

ಈ ಕವನದ ಎರಡನೆಯ ನುಡಿಯಲ್ಲಿ ತಾಯಿಯು ಹೇಗೆ ಮಗುವಿಗೆ ಜನನವನ್ನು ಕೊಡವುದಲ್ಲದೆ, ಹಾಲನ್ನು ಕುಡಿಸಿ, ಬೆಳೆಸಿ, ನಡೆ-ನುಡಿಯನ್ನು ಕಲಿಸುತ್ತಾಳೆ ಎನ್ನುವುದನ್ನು ಮನಮುಟ್ಟುವಂತೆ, ಹೃದಯ ತಟ್ಟುವಂತೆ ಹೇಳಿದ್ದಾರೆ :

"ನೀ ಮೈಯನೊಂದೆ ರೂಪಿಸಿದೆಯೇನು ಬಸಿರಲ್ಲಿ ರಕ್ತ ಸುರಿದು ?
ಹಸಿದಿರುವ ಬಾಯ್ಗೆ ನೀ ತಾಯಿ ಬಂದೆ ಹಾಲಾಗಿ ಎದೆಗೆ ಹರಿದು.
ಹಸು ಕರುವಿಗಾಗಿ ನಡೆದಂತೆ ದುಡಿದೆ; ನಡೆಗಲಿಸಲೆಂದು ದುಡಿಸಿ.
ಮುದ್ದಿಟ್ಟು ತುಟಿಗೆ, ಮುದ್ದಾದ ಮಾತ ಮುದ್ರಿಸಿದೆ, ಮನವ ನುಡಿಸಿ."

ತಾಯಿ ಮಗುವಿಗೆ ಜನನ ಕೊಡುವಮುನ್ನ ರಕ್ತ ಮಾಂಸ ಸುರಿದು ರೂಪುಗೊಡುತ್ತಾಳೆ; ಹಸಿದ ಕೂಸಿನ ಬಾಯಿಗೆ ತಾಯಿ ಹಾಲಾಗಿ ಎದೆಯನ್ನು ಹರಿಸುತ್ತಾಳೆ. ಹಸು ಕರುವಿಗೆ ನಡೆಯನ್ನು ಕಲಿಸುವಂತೆ ತಾಯಿ ಕೂಸನ್ನು ದುಡಿಸಿ, ನಡೆಯನ್ನು ಕಲಿಸುತ್ತಾಳೆ; ತುಟಿಗೆ ಮುದ್ದಿಟ್ಟು, ಆ ಮುದ್ದಿನ ಮುದ್ರೆಯನ್ನೊತ್ತುವ ಮೂಲಕ, ಮುದ್ದಿನ ಮಾತನ್ನು ಕಲಿಸುವ ಮಾತೆಯಾಗುತ್ತಾಳೆ. ತಾಯಿಯನ್ನು ಕುರಿತಾದ ಅತ್ಯಂತ ಚಿತ್ತಾಕರ್ಷಕ ಚಿತ್ರಣ ಇದಾಗಿದೆ.

ಮೂರನೆಯ ನುಡಿಯಲ್ಲಿ ತಾಯಿ ಹಾಗೂ ತನಯರ ಸಂಬಂಧ ನಿರೂಪಣೆ ಅತ್ಯಮೂಲ್ಯವಾಗಿದೆ. ತನಯನನ್ನು ರೂಪಿಸುವಲ್ಲಿ ತಾಯಿಯ ತ್ಯಾಗ-ಪರಿಶ್ರಮ ಅಪಾರ :

"ಭ್ರಮಿ ನಾನು ಭ್ರಮರ ; ನಿಃಶಂಕಿ ನೀನು. ಈ ಜಾತಶಂಕಿಯನ್ನು
ಶಮಿಯಾಗಿ ಶಮಿಸಿ,ನೀನಾಗಿ ಹೊಸೆದು ಹೊತ್ತಿಸಿದೆ ಬೆಂಕಿಯನ್ನು
ದಮಿ ನೀನು, ನಾನು ದುರ್ದಮ್ಯ. ನಿನ್ನ ಕರುಣೆಯೊಳೆ ನನ್ನ ತೊಯ್ಸಿ
ಶ್ರಮಿ ನೀನು, ನಿನ್ನ ಶ್ರಮ ಮಾಡಿಕೊಂಡೆ ಮೈಮುರಿಯೆ ನನ್ನ ಗೈಸಿ."

ತಾಯಿ ತತ್ತ್ವದ ತಿರುಳೇ ಇಲ್ಲಿ ಮೂರ್ತಸ್ವರೂಪ ತಾಳಿ ಬಂದಿದೆ. ತಾಯಿಯನ್ನು 'ಭ್ರಮಿ', 'ನಿಃಶಂಕಿ', 'ದಮಿ' ಮತ್ತು 'ಶ್ರಮಿ' ಎಂಬ ನಾಕು ಪ್ರಕ್ರಿಯೆಗಳ ಮೂಲಕ ತನಯನನ್ನು ಪರಿವರ್ತಿಸುವ ಪ್ರಕ್ರಿಯೆಯನ್ನು ಇಲ್ಲಿ ಪ್ರತಿಪಾದಿಸಿದ್ದಾರೆ. ತಾಯಿ ಭ್ರಮಿಯಾದರೆ ತನಯ ಭ್ರಮರ; ತನಯನು ಹುಟ್ಟಾ ಶಂಕಿಯಾದರೆ, ತಾಯಿ ನಿಃಶಂಕಿಯಾಗಿ ತನಯನ ಶಂಕೆಗಳನ್ನು ಶಮಿಯಾಗಿ ಶಮಿಸಿ, ಅವುಗಳನ್ನು ಹೊಸೆದು ಹೊತ್ತಿಸಿ, ಬೆಂಕಿಯಲ್ಲಿ ಸುಟ್ಟು ನಿವಾರಿಸುತ್ತಾಳೆ. ತನಯದುರ್ದಮ್ಯನಾಗಿದ್ದಾಗ, ತಾಯಿಯು 'ದಮಿ'ಯಾಗಿ, ಕರುಣೆಯಲ್ಲಿ ಈ ತನಯನನ್ನು ತೊಯ್ಸಿ ಅವನಲ್ಲಿಯಯ ರಾಕ್ಷಸೀ ಪ್ರವೃತ್ತಿಯನ್ನು ದಮನಗೊಳಿಸಿ, ಅವನನ್ನು ಪರಿವರ್ತಿಸುತ್ತಾಳೆ. 'ಶ್ರಮಿ'ಯಾಗಿ ತಾಯಿ, ತನ್ನ ಶಕ್ತಿಯಿಂದ ತನಯನನ್ನು ಮೈಮುರಿವಂತೆ ದುಡಿಸಿ, ಅವನಲ್ಲಿ ಕಾಯಕತತ್ತ್ವದ ಮಹಿಮೆಯನ್ನು ಮೂಡಿಸುತ್ತಾಳೆ.

ಇನ್ನು ಕೊನೆಯ ನುಡಿಯು ತಾಯಿಯ ಔನ್ನತ್ಯವನ್ನು ಬಣ್ಣಿಸುತ್ತದೆ.

"ನೀ ತೇಜಃಪುಂಜ, ನಾನೊಂದು ಚುಕ್ಕೆ, ಬಸಿರುಕ್ಕಿ ಹೊರಗೆ ಬಿದ್ದೆ
ಇನ್ನೂನು ಭ್ರಮಣ ನಡೆದಿಹುದು, ತುಸುವು ಹರೆದಿಲ್ಲ ಹುಟ್ಟುನಿದ್ದೆ
ಬಾನಗಲದಲ್ಲು ನನ್ನಗಲವಂತೆ ನನ್ನನ್ನು ಕೂಡಿಕೊಂಡು
ಹೂರಟಿರುವೆ ಎತ್ತೊ ಬಿಡದೆನ್ನ ನಿನ್ನ ಆ ರಥಕೆ ಹೂಡಿಕೊಂಡು."

ತನಯನು ಆ ತೇಜಪುಂಜದ ಬಸಿರಿನಿಂದ ಉಕ್ಕಿ ಹೊರಬಂದು ಒಂದು ನಕ್ಷತ್ರದಂತೆ ತನ್ನದೇ ಭ್ರಮಣವನ್ನು ನಡೆಸುತ್ತಾನೆ. ತನಯನ ಹುಟ್ಟುನಿದ್ದೆ ಇನ್ನೂ ಹರೆಯದಿದ್ದಾಗಲೇ, ಈ ಭ್ರಮಣವು ಪ್ರಕೃತಿ ನಿಯಮದಂತೆ ಪ್ರಾರಂಭವಾಗಿಬಿಡುತ್ತದೆ. ಆದರೆ ಈ ತನಯನ ಭ್ರಮಣವು ನಕ್ಷತ್ರ ಪುಂಜದ ಬಾನಗಲದ ಭ್ರಮಣದೊಡನೆಯೇ ಸಾಗುತ್ತದೆ. ತಾಯಿಯು ತನ್ನ ರಕ್ಷಕ್ಕೆ ತನಯನನ್ನು ಹೂಡಿಕೊಂಡೇ ಸಾಗುತ್ತಾಳೆ. ಇದು ತಾಯಿ-ತನಯರ ಬಾಂಧವ್ಯದ ಯಶೋಗಾಥೆ. ಅಂಬಿಕಾತನಯದತ್ತರ ತಾಯಿ ತತ್ತ್ವದರ್ಶನ.

'ದಿ ಮದರ್' ಈ ಕವನದಲ್ಲಿ ಬೇಂದ್ರೆಯವರು ಶ್ರೀಮಾತೆಯ ಉದ್ಭವಶಕ್ತಿಯ ಅನಾವರಣ ಮಾಡಿದ್ದಾರೆ ಎಂದೇ ಹೇಳಬೇಕು. ಶ್ರೀ ಅರವಿಂದರು ಶ್ರೀಮಾತೆಯವರ ಬಗ್ಗೆ ಹೇಳಿ, "It is through the mother that all things are attained" (ಎಲ್ಲ ಸಿದ್ಧಿಗಳನ್ನು ಮಾತೆಯ ಮೂಲಕವೇ ಸಾಧಿಸಲಾಗುತ್ತಿದೆ) ಎಂಬುದರ ಸ್ಫೂರ್ತಿ ಈ ಕವನದ ರಚನೆಗೆ ಪ್ರೇರಣೆ.

"ಮಾಯೆಯನೆ ಮೊಲೆಗೊಳಿಸಿ ಹಾಲ್ಗುಡಿಸಿ, ಈ ತಾಯಿ
ಗಾಯತ್ರಿ ಮಂತ್ರಕ್ಕೆ ಭಾಷ್ಯ ಬರೆದವಳು
ಅಶ್ವಪತಿಯ ಉಪಾಸ್ಯ ದೇವತೆಯು ಸಾವಿತ್ರಿ!
ಸೂರ್ಯನಾಚೆಯ ಸೋಮಹಾಸ್ಯ ಕರೆದವಳು"

"ಸತ್ಯವಂತರ ಮರ್ತ್ಯ ಡಿಂಭಗಳ ಗೊಂಬೆಯಲಿ
ಶಮರಮಿತ ನವಬಿಂಬ ಸೃಷ್ಟಿ ಮೆರೆದವಳು
ಮಾರ್ತಾಂಡ ಮಂಡಲದ ಅಂಡವನು ಪುಟಗೊಳಿಸಿ
ಹಂಸಜಾತಿಯ ಜೀವಜಾತಿ ತೆರೆದವಳು."

"ಶ್ರೀಮಾತೆ"ಯ ಶಕ್ತಿ-ಸಾಮರ್ಥ್ಯ-ಸಿದ್ಧಿಗಳನ್ನು ಬಣ್ಣಿಸುವ ಈ ಕವನ ಅತ್ಯಂತ ಉತ್ಕೃಷ್ಟವಾದುದಾಗಿದೆ. ಅನೇಕ ಸ್ತ್ರೀದೇವತೆಗಳ ಸುಗುಣಗಳ ಖನಿಯಾಗಿ ರೂಪುತಾಳಿ, ಹೊಸ ಜಾತಿಯ ಮಾನವ ಜನಾಂಗವನ್ನು ರೂಪಿಸುವ ಶಕ್ತಿಯಾದವಳು ಎಂದು ಬಣ್ಣಿಸುವಾಗ. ಮಾಯೆಯೇ ಮೊಲೆಯಾಗಿ ಹಾಲ್ಗುಣಿಸಿದರೂ ಕೂಡ ದುರ್ದಮರಾಗದಂತೆ ಗಾಯತ್ರಿ ಮಂತ್ರದ ಭಾಷ್ಯವನ್ನು ಬರೆದವಳು; ಸಾವಿತ್ರಿಯ ಶಕ್ತಿಯನ್ನು ಹೊಂದಿ ಸೂರ್ಯನಾಚೆಯ ಅಮೃತಾನಂದವನ್ನು ಕರೆದವಳು; ಸತ್ಯವಂತರ ಮೃತ ತತ್ತಿಗಳನ್ನು ನಾಶಮಾಡಿ, ಶಮನಗುಣಸಹಿತ ನವ ಬಿಂಬಗಳನ್ನು ಸೃಷ್ಟಿಸಿದವಳು; ಸೂರ್ಯಮಂಡಲದ ಅಂಡವನ್ನು ಚೈತನ್ಯಗೊಳಿಸಿ, "ಹಂಸಜಾತಿ"ಯ ಜೀವಜಾತಿಯನ್ನು ನಿರ್ಮಿಸುವ ಮೂಲಕ ಶಾಂತಿ ಶಮನ ಗುಣಧರ್ಮವುಳ್ಳ ಹೊಸ ಮಾನವ ಜಾತಿಯನ್ನು ನಿರ್ಮಿಸಿದವಳು. ಈ ಎಲ್ಲ ಶಕ್ತಿಗಳ ಸಂಗಮವಾಗಿ ನವಮಾನವ ಜಾತಿಯ ನಿರ್ಮಾಣಕ್ಕಾಗಿಯೇ ಉದ್ಭವಿಸಿದ 'ದಿ ಮದರ್' ಕುರಿತು ಅಂಬಿಕಾತನಯದತ್ತರ ಭಾಷ್ಯ ಅಪೂರ್ವವೂ ಅಮೋಘವೂ ಆಗಿದೆ.

"ಶ್ರೀ ಮಾತೃಶ್ರೀಗೆ" ಕವನವು "ತಾಯಿಯವರ ದೃಷ್ಟಿ ಸೋಂಕಿದಾಗಿನ ಎಚ್ಚರ"ವನ್ನು ಬಿಂಬಿಸುವ ಕವನವೆಂದು ಭಾವಸೂಚಿಯಲ್ಲಿ ಬಣ್ಣಿಸಿದ್ದಾರೆ. ಆ ಎರಡು ನುಡಿಗಳು ಹೀಗಿವೆ :

"ನಿನ್ನ ನೋಟವೆ ಹಾಲು
ತಾಯಿ ನೀನು.
ಕಂಗಳಿಂದಲೆ ಕುಡಿವೆ
ಕೂಸು ನಾನು."

"ಕಂಗಳಿಂದಲೆ ನುಡಿವೆ
ತಾಯಿ ನೀನು.
ನನ್ನ ಕಣ್ಣೇ ಕಿವಿಯು
ಕವಿಯು ನಾನು."

ಅತ್ಯಂತ ಸಾಂಕೇತಿಕವಾಗಿದೆ ಈ ಕವನ. ಅಂಬಿಕಾತನಯದತ್ತರ ಹಾಗೂ ಶ್ರೀ ಮಾತೆಯವರ ಸಂಬಂಧ-ಅನುಬಂಧಗೀತೆ ಇದು. ತಾಯಿಯ ನೋಟವೇ ಹಾಲಾಗಿ; ತನಯ, ಕಂಗಳಿಂದಲೇ ಅದನ್ನು ಕುಡಿಯುತ್ತಾನೆ. ತಾಯಿ ಕಣ್ಣಿನಿಂದ ನುಡಿದದ್ದನ್ನು, ತನಯ ತನ್ನ ಕಣ್ಣನ್ನೇ ಕಿವಿಯಾಗಿಸಿ ಕೇಳುತ್ತಾನೆ. ಈ ಶ್ರವಣವೇ ಕವಿ-ತನಯನ ಕಾವ್ಯೋದ್ಯೋಗದ ಚೇತನಾಶಕ್ತಿ.

ಇನ್ನು "ನಾಲ್ವರು ತಾಯಂದಿರು" ಕವನದ ನೆಲೆಕಟ್ಟುತ್ತಿರುವ ನಾಲ್ಕು ಮಾತೃಶಕ್ತಿಗಳನ್ನು ಸ್ವಾಗತಿಸುವ ಗೀತೆಯಾಗಿದೆ, ಈ ಮಹೇಶ್ವರಿ, ಮಹಾಕಾಳಿ, ಮಹಾಲಕ್ಷ್ಮಿ, ಮಹಾಸರಸ್ವತಿ ಮಾತೃಶಕ್ತಿ ದೇವತೆಗಳ ಸ್ವಾಗತಗೀತೆ ಇದು. ಈ ಗೀತೆಯ ಕೊನೆಯ ನುಡಿ ಹೀಗಿದೆ :

"ಅಂಬಿಕಾತನಯನಾ
ನಿಲಿಸಿರವ್ವ ದಿನ ದಿನಾ"

ಅಂಬಿಕಾತನಯದತ್ತರ "ಮಾತೃತತ್ತ್ವ ದರ್ಶನ" ಅತ್ಯಂತ ಮಹತ್ತ್ವದ ದರ್ಶನವಾಗಿದ್ದು, "ಹೃದಯ ಸಮುದ್ರ" ಸಂಕಲನಕ್ಕೆ ಈ ಕುರಿತಾದ ಗೀತೆಗಳ ಗುಚ್ಛ ಇಡೀ ಸಂಕಲನಕ್ಕೆ ಒಂದು ಔನ್ನತ್ಯವನ್ನು ಒದಗಿಸಿದೆ ಎಂದು ಹೇಳಬಹುದಾಗಿದೆ.

"ಬೇಂದ್ರೆ ಕುಟೀರ",
ಹುಬ್ಬಳ್ಳಿ - ೩೦
೧೮-೫-೨೦೦೭

ಡಾ|| ಕೆ. ಎಸ್. ಶರ್ಮಾ
ನಿರ್ದೇಶಕರು
ವರಕವಿ ಡಾ|| ದ. ರಾ. ಬೇಂದ್ರೆ
ಸಂಶೋಧನ ಸಂಸ್ಥೆ ಹಾಗೂ ಬೇಂದ್ರೆ ಸಂಗೀತ ಅಕಾಡಮಿ.

ಕಾರ್ಯಸ್ಥಳ : "ಬೇಂದ್ರೆ ಕುಟೀರ", ವಿಶ್ರಮ ಚೇತನ, ಗೋಕುಲ ರಸ್ತೆ ಹುಬ್ಬಳ್ಳಿ-೫೮೦ ೦೩೦. ದೂರವಾಣಿ : ೨೩೩೦೪೮೬೩

## ಹೃದಯ ಸಮುದ್ರ

ಮಹಾಯೋಗಿ ಶ್ರೀ ಅರವಿಂದರ ಆಶ್ರಮವು ಪಾಂಡಿಚೇರಿಯ ಸಮುದ್ರದ ದಂಡೆಗಿದೆ. ಆಧ್ಯಾತ್ಮಿಕ ಸಾಧನೆಯಲ್ಲಿ ದೈಹಿಕ ಶ್ರಮಕ್ಕೆ ಪ್ರಾಮುಖ್ಯ ಕೊಟ್ಟು, ಶ್ರೀಮಾತೆ ಆಶ್ರಮವನ್ನು ಕಟ್ಟಿ ಬೆಳೆಸಿದರು. ದೇಹ ಪವಿತ್ರವಾದಾಗ, ಮನಸ್ಸು, ಬುದ್ಧಿ ಶುದ್ಧವಾಗಿ, ಸಾಧಕನ ಹೃದಯ ಕಮಲ ಅರಳುತ್ತದೆ. ಈ ಅರಳುವಿಕೆಯು ಅನುಭಾವದ ವಿಷಯವೇ ಹೊರತು, ಅನುಭವಗಳ ಹರಟೆಯಲ್ಲ.

ಪ್ರತಿ ಮನುಷ್ಯನು ಯಾರನ್ನೋ ಗುರುವಾಗಿ ನಂಬುವುದು ಅವಶ್ಯ. ಗುರು ವ್ಯಕ್ತಿಯಾಗುವ ಅವಶ್ಯಕತೆ ಇಲ್ಲ. ಗಿಡ, ಪ್ರಾಣಿ, ಕಲ್ಲು, ದೈಹಿಕಶ್ರಮ ಗುರು ಆಗಬಹುದು. ಗುರು-ಶಕ್ತಿಯಲ್ಲಿ ನಂಬಿಕೆ ಬೆಳೆದಾಗ, ಪ್ರತಿಯೊಬ್ಬನ ಹೃದಯದ ಅಶುದ್ಧಿ=ಉಪ್ಪು ನೀರು, ಉಪ್ಪನ್ನು ಜೀರ್ಣಿಸಿ, ಅಮೃತತ್ವದ ಅಮರರುಚಿಯ ಅನುಭಾವ ಕೊಡುತ್ತದೆ. ಇದರ ಬೆಲೆ ಕಂಡವರಿಗಷ್ಟೇ=ಜ್ಞಾನಿಗಳಿಗೆ ಮಾತ್ರ ತಿಳಿದಿದೆ. ಅಂಥ ಜ್ಞಾನಿಗುರುವಿನ ಭೆಟ್ಟಿಯಾದಾಗ, ಅಂಬಿಗನ ಮತ್ತು ನಂಬಿಗನ ಜೀವನವೇ ಸಾಮರಸ್ಯದ ಸಮುದ್ರವಾಗುತ್ತದೆ. ಇದು ಆಗಲು, ಶಿಷ್ಯನಿಗೆ ಗುರುವಿನ ಬಗ್ಗೆ ಉನ್ನತ ಮಟ್ಟದ ಪ್ರೇಮಬೇಕು. ಈ ಪ್ರೇಮ ಬಲವಾಗಿ ಪರಿವರ್ತನಗೊಂಡಾಗ, ಗುರುವಿನ ಕರೆ ಶಿಷ್ಯನಿಗೆ ಶ್ರುತಿಯಾಗಿ, ಅವನು ಕಾರ್ಯನಿರತನಾಗುತ್ತಾನೆ. ಇದು ಸಾಧ್ಯವಾಗಿ ಸಕಲರಿಗೂ ಒಳಿತಾಗಲಿ ಎಂಬ ಅಪೇಕ್ಷೆಯಿಂದ ಬೇಂದ್ರೆ ರಚಿಸಿದ ಮತ್ತೆ ಅರವತ್ತು ಕವನಗಳ ಗುಚ್ಛ - 'ಹೃದಯ ಸಮುದ್ರ'.

- ಸಂ.

# ೧ ಹೃದಯ ಸಮುದ್ರ

೧

ಬಂಗಾರ ನೀರ ಕಡಲಾಚೆಗೀಚೆಗಿದೆ ನೀಲ ನೀಲ ತೀರಾ
ಮಿಂಚುಬಳಗ ತೆರೆತೆರೆಗಳಾಗಿ ಅಲೆಯುವದು ಪುಟ್ಟಪೂರಾ,
ಅದು ನಮ್ಮ ಊರು, ಇದು ನಿಮ್ಮ ಊರು, ತಂತಮ್ಮ ಊರೊ ಧೀರಾ.
ಅವರೊಳಗೆ ನಾವು, ನಮ್ಮೊಳಗೆ ತಾವು, ಅದು ಇಲ್ಲವಣ್ಣ ದೂರಾ.

೨

ಕರೆ ಬಂದಿತಣ್ಣ, ತೆರೆ ಬಂದಿತಣ್ಣ, ನೆರೆ ಬಂದಿತಣ್ಣ ಬಳಿಗೆ.
ಹರಿತಽದ ಭಾವ, ಬೆರಿತಽದ ಜೀವ, ಅದರೊಳಗೆ ಒಳಗೆ ಒಳಗೆ.
ಇದೆ ಸಮಯವಣ್ಣ ಇದೆ ಸಮಯ ತಮ್ಮ, ನಮ್‌ನಿಮ್ಮ ಆತ್ಮಗಳಿಗೆ.
ಅಂಬಿಗನು ಬಂದ ನಂಬಿಗನು ಬಂದ ಬಂದಽದ ದಿವ್ಯ ಗಳಿಗೆ.

೩

ಇದು ಉಪ್ಪುನೀರ ಕಡಲಲ್ಲೊ: ನಮ್ಮ ಒಡಲಲ್ಲು ಇದರ ನೆಲೆಯು.
ಕಂಡವರಿಗಲ್ಲೊ ಕಂಡವರಿಗಷ್ಟೆ ತಿಳಿದಽದ ಇದರ ಬೆಲೆಯು.
ಸಿಕ್ಕಲ್ಲಿ ಅಲ್ಲ, ಸಿಕ್ಕಲ್ಲೆ ಮಾತ್ರ ಒಡೆಯುವದು ಇದರ ಸೆಲೆಯು,
ಕಣ್ಣರಳಿದಾಗ, ಕಣ್‌ಹೊರಳಿದಾಗ ಹೊಳೆಯುವದು ಇದರ ಕಳೆಯು,

೪

ಬಂದವರ ಬಳಿಗೆ ಬಂದಽದ ಮತ್ತು ನಿಂದವರ ನೆರೆಗು ಬಂದಽದೋ ಬಂದಽದ,
ನವಮನುವು ಬಂದ, ಹೊಸ ದ್ವೀಪಗಳಿಗೆ ಹೊರಟಾನ ಬನ್ನಿ ಅಂದಽದೋ ಅಂದಽದ.

---

ಭಾವ : ಶ್ರೀ ಅರವಿಂದರ ಅತಿಮಾನಸ ಸಾಕ್ಷಾತ್ಕಾರದಿಂದ ಬಂದ ಸಂಸಾರೋತ್ತಾರಕ ಕರೆಯನ್ನೇ ನೆನಿಸಿ ಈ ಭಾವಲಹರಿ ಉತ್ಕಟತೆಯನ್ನು ತಾಳಿದೆ.

ಶಬ್ದಾರ್ಥ : ನೆರೆ=ತುಂಬಿದ ಜಲಪ್ರವಾಹ, ಗುಂಪುಸೇರು.

ವಿಶೇಷ : ಈ ಕವನದ ಪ್ರಥಮ ಮುದ್ರಣ 'ಜೀವನ' ಪತ್ರಿಕೆಯ ೧೯೪೩ರ ''ಶ್ರೀ ಅರವಿಂದ ವಿಶೇಷ ಸಂಚಿಕೆ''ಯಲ್ಲಿ. ನುಡಿ-೨ ಸಾಲು-೨ರ ಕೊನೆ ''ಅದರೊಳಗಿನೊಳಗಿನೊಳಗೆ'' ಎಂದಿತ್ತು. ಹಾಗೂ ನುಡಿ-೪ ಸಾಲು-೧ 'ನಿಂದವರ ಬಳಿಗೆ' ಎಂದಿದ್ದು ಸಾಲು-೨ ಹೊಸ ದಿಕ್ಕುಗಳಿಗೆ (ಹೊಸ ದ್ವೀಪಗಳಿಗೆ) ಎಂದಿತ್ತು. ಈ ಬದಲಾವಣೆ ಬೇಂದ್ರೆಯವರೇ ೧೯೫೬ಕ್ಕೆ ಮಾಡಿದ್ದು.

## ೨ ಶ್ರೀ ಅರವಿಂದರಿಗೆ



೧

ನಿನ್ನಾ ಹುಬ್ಬಿನ ಇಬ್ಬದಿ
ಗರಿ ಚಾಚಿದೆ ಗರುಡ.
ಬಾನ್ಗಣ್ಣಾಗಿಹೆ ನೀ,ನಾ
ಗುರಿಯಿಲ್ಲದ ಕುರುಡ.

೨

ಕಣ್ಣಿವೆ ಚಾಟಿಗೆ ಕಟ್ಟಿದೆ
ಆನಂದದ ಹುಟ್ಟು
ಒಳಗಿದೆ ಹೂವರಳಿದವೊಲು
ವಿಶ್ವದ ಇಡಿಗುಟ್ಟು

೩

ಕೊಡು ತಂದೇ, ಇನ್ನೊಂದೇ
ಒಂದೇ ಬಾಯ್ಗುಟುಕು,
ಕೊಡು ತಾಯೇ ಇನ್ನೊಮ್ಮೇ
ಒಮ್ಮೇ ಎದೆ ಗುಟುಕು.

---

ಭಾವ : ಶ್ರೀ ಅರವಿಂದರ ಭಾವಚಿತ್ರದ ದರ್ಶನದಿಂದ ಉದ್ದೀಪ್ತವಾದ ಚಿತ್ರ ಮತ್ತು ಭಾವ. ಶ್ರೀ ಅರವಿಂದರ ಕಾಲ-೧೮೭೨ ರಿಂದ ೧೯೫೦.

ಶಬ್ದಾರ್ಥ : ಚಾಟು-ಚಾಟಗೆ=ಸಂತೋಷಕರವಾದ ರಕ್ಷಣೆಗಾಗಿ.

ವಿಶೇಷ : ದ. ರಾ. ಬೇಂದ್ರೆಯವರು ಶ್ರೀಮಾತಾ ಶ್ರೀ ಅರವಿಂದರ ಪ್ರಥಮ ದರ್ಶನ ಪಡೆದದ್ದು ೨೧ನೇ ಫೆಬ್ರುವರಿ ೧೯೪೩ರಲ್ಲಿ.

## ೩ ಶ್ರೀ ಗುರುವೆ !

೧

ಶ್ರೀಗುರುವೆ ಅರುವೆ,ಶರಣಾಗಿ ಬರುವೆ, ಕರುಣೆಯನು ಕೋರಿ ಬರುವೆ.
ಹೃತ್‌ಪ್ರಕೃತಿ ತಂದ ಕಿಡಿಹೂವುಗಳನು ಶ್ರೀಚರಣಕೆರೆಯುತಿರುವೆ.

೨

ಆ ಪಾದಪದ್ಮ ಎದೆಗವಚಿ ಹಿಡಿದು ನಡುನೆತ್ತಿಗೆತ್ತಿಕೊಂಬೆ
ಉಸಿರಿಂದಲದನೆ ಬಲಗೊಂಬೆ ನನ್ನ ಕಣ್‌ಗೊಂಬೆಗೊತ್ತಿಕೊಂಬೆ.

೩

ಕಣ್ಣಿಂದ ನಿನ್ನ ಕಣ್ಣಿಸೇರಿ ನನ್ನ ಎದೆಯೊಳಣ ಬೆಳಕನೆತ್ತಿ
ತಿರುವಮೂರ್ತಿ ಮಾಡು ನನ್ನನ್ನು ನನ್ನ ಚಿನ್ಮೋದ-ಬೋಧ ಬಿತ್ತಿ

೪

ಭವಭವಕೆ ನನ್ನ ಮುಂದೆತ್ತಿ ಒತ್ತಿ ತಂದಂಥ ತಂದೆ ನೀನು.
ಭಾವಕ್ಕೆ ಇಳಿದು ಸದ್ಭಾವ ಬಲಿಸಿ ಬರುವಂತೆ ಮಾಡು ನಾನು.

೫

ಅಂತರ್ಯದೊಂದು ಚೈತನ್ಯ ನಿನ್ನ ಕೈಂಕರ್ಯ ಕರ್ತೃವಾಗಿ
ಕ್ಷೇತ್ರಜ್ಞ ಬರಲಿ ಚೈತ್ಯೇಶನಾಗಿ ಮಧುಬೋಧ ಮೋದ ಮಾಗಿ.

೬

ಹೇ ಭವನೆ ಶಿವನೆ, ಜವನವರ ಜವಕೆ ಶವವಾಗದಂತೆ ಮಾಡು
ಆ ಅಮೃತದೃಷ್ಟಿಯಲಿ ದಿವ್ಯ-ಸೃಷ್ಟಿಯಲಿ ನೆರೆದು ತೆರೆದು ನೋಡು.

---

ಭಾವ : ನಮ್ಮ ನಮ್ಮ ಚಿತ್ ಪ್ರಕೃತಿಯ ಪುರುಷನಿಗೂ, ಸರ್ವಕ್ಷೇತ್ರಗಳ ಕ್ಷೇತ್ರಜ್ಞನಿಗೂ ಸಂಬಂಧ ಬೆಳೆಯುವಂತೆ ಶ್ರೀ ಗುರು ಅರವಿಂದರು ಕರುಣಿಸಬೇಕೆಂಬ ಪ್ರಾರ್ಥನೆ.

ಶಬ್ದಾರ್ಥ : ಅರುವೆ=ಪ್ರಿಯನೆ. ಮಧುಬೋಧ=ಗ್ರಾಹ್ಯವಾದ ತಿಳುವಳಿಕೆ. ಜವ=ಯಮ. ವೇಗ.

# ೪ ಶ್ರೀಗುರು-ಕರುಣ-ಚರಣ

೧

ಒಳಬಳಗಿನೊಳಗೆ ತಮ ಮಿಂಚಿ ತೊಳಗೆ ಹುಸಿ ಬಯಲೆ ಹೊತ್ತಿ ಬೆಳಗೆ
ಮೂಡಣವು ಇಲ್ಲ ಪಡುವಣವು ಇಲ್ಲ ಅದಕಿಲ್ಲ ಮೇಲೆ ಕೆಳಗೆ.
ತನಿರಸ್ನದೊಂದು ಕೆಂಗಿಡಿಯ ಕುಡಿಯೆ ಸಿಡಿದರಳಿ ಉರುಳಿದಂತೆ
ನೆಲ ಕಾಣದೊಂದು ಹಗಲಿಹುದು ಇಲ್ಲಿ ನವಮುದವೆ ಹೊರಳಿದಂತೆ.

೨

ಸೈರಣೆಯ ಸಿರಿಯ ರೇಸಿಮೆಯ ಎಳೆಯ ನಯವಾದ ಹಾಸಿನಲ್ಲಿ
ಒರಗಿರುವ ಕಣ್ಣು ತೆರೆದಿರುವ ಹುಸಿಯೆ ನಗುತಿರುವ ಕೂಸಿನಲ್ಲಿ
ಕಂಡೊಂದು ಅಂದ ತಾಯನ್ನೆ ನಂಬಿ ತುಂಬಿರುವ ಬಿಂಬವಾಗಿ
ಸೆಲೆಯುವದು ಹುದುವನೊಳಗೊಂಡು ತಾನೆ ತಿಳಿಯಾಗಿ ಗುಂಭವಾಗಿ

೩

ಇದು ಯಾವ ದೆಸೆಯೊ, ಹೆಸರೇನು ಇದಕೆ ಇದಕಿಲ್ಲ ಹಾದಿ ಹೊರಗೆ.
ಇಲ್ಲಿಂದ ಆದಿ, ಇದು ತಾನನಾದಿ, ಇದಕೇಕೆ ಬೆಡಗು ಬೆರಗೆ ?
ಇಲ್ಲಿಹುದು ನಾನೆ ನಾನಾದ ತಾನೆ ತಾನೆಂಬ ತನ್ನತನವು.
ಇದು ಗುಪ್ತಧನವು ನಿಃಸ್ತಬ್ಧ ಮನವು ಇದು ಪೊಳ್ಳು, ತುಂಬು, ಘನವು.

೪

ಏನದರ ಮಹಿಮೆ ! ನೆಲಸಿಹುದು ನೋಡ ಗುರುಕರುಣಚರಣದಂತೆ.
ಹಿಮಶಿಖರದಲ್ಲಿ ಕುಡಿಗೊಂಡ ಶಾಂತ ತಂಗದಿರ ಕಿರಣದಂತೆ.

---

ಭಾವ : ಒಂದು ವಿಶೇಷ ಅನುಭವ, ವರ್ಣನೆಯಲ್ಲಿಯೇ ವಿವರ ಅಡಗಿದೆ.

ಶಬ್ದಾರ್ಥ : ಹುದುವ=ಪುದುವ-ಒಂದಾಗು, ಸರಸತೆಹೊಂದು.

# ೫ ಅರವಿಂದನಾಭನ ಪಾದಾರವಿಂದಕ್ಕೆ

ಅರವಿಂದನಾಭನ ಪಾದಾರವಿಂದಕೆ ಹಸ್ತಾರವಿಂದವು ಬಾಗುತಿರೆ,
ನಯನಾರವಿಂದವು ಮುಚ್ಚಿಕೊಂಡಿರುವಾಗ ಹೃದಯಾರವಿಂದವು ಅರಳಲಿರೆ
ಆಸ್ಯಾರವಿಂದವು ನಲಿವನು ಸೂಸುವ ತೆರ ನಿನಗೆ ಸೂಸಲಿ ಮಂಗಲವು
ಎಂದಿತು ಅರವಿಂದ ಪದಭೃಂಗ ಅರವಿಂದು! ಅರವಿಂದಮಯವಾದ ಮಾನಸವು.

---

ಭಾವ : ಶ್ರೀ ಅರವಿಂದರ ತನ್ಮಯತೆಯ ಚಿತ್ರ ಇಲ್ಲಿ ಮೂರ್ತಿಸಲಾಗಿದೆ.

ಶಬ್ದಾರ್ಥ : ಅರವಿಂದು=ಅರವಿಂದರ ಪದಭೃಂಗದ ಹೆಸರು. ಅರವು+ಇಂದು=ಇಂದಿನ ಜ್ಞಾನ.

ವಿಶೇಷ : ಒಂದು ಮುದ್ರಣದಲ್ಲಿ ಈ ಕವನ ೬ ಸಾಲುಗಳ ೨ ಪಟ್ಪದಿಯಾಗಿ ಬೇಂದ್ರೆ ಮಾಡಿದ್ದು ಹೀಗೆ-

೧

ಅರವಿಂದ ನಾಭನ
ಪಾದಾರವಿಂದಕೆ
ಹಸ್ತಾರವಿಂದವು ಬಾಗುತಿರೆ॥
ನಯನಾರವಿಂದವು
ಮುಚ್ಚಿಕೊಂಡಿರುವಾಗ
ಹೃದಯಾರವಿಂದವು ಅರಳಲಿರೆ॥

೨

ಆಸ್ಯಾರವಿಂದವು
ನಲಿವನು ಸೂಸುವ
ತೆರ ನಿನಗೆ ಸೂಸಲಿ ಮಂಗಲವು
ಎಂದಿತು ಅರವಿಂದ
ಪದಭೃಂಗ ಅರವಿಂದು
ಅರವಿಂದ ಮಯವಾದ ಮಾನಸವು.

# ೬ ಚಿತ್ತಭಿತ್ತಿಯ ಚಿತ್ರ

ಚಿತ್ತಭಿತ್ತಿಯಲಿ ಚಿತ್ರ ಬರೆಯುವ ವಿಚಿತ್ರ ಪುರುಷನಾರು ? ॥ ಪಲ್ಲವಿ ॥

೧

ನೋಡನೋಡುತಿರೆ ಜಡವೆ ಜಲದವೊಲು ತೆಳ್ಳನಾರುಪಾರು.
ಕುಣಿವ ಕಣಗಳಲಿ ತೆರೆದ ಅಣುಗಳೊಳು ಬೇರೆ ಏರುಪೇರು.
ಬಣ್ಣ ಒಡೆಯುತಿವೆ ಕಣ್ಣು ಪಡೆಯುತಿದೆ ಸಣ್ಣ ಕನ್ನನಾರು.
ಚಿತ್ತಭಿತ್ತಿಯಲಿ ಚಿತ್ರಬರೆಯುವ ವಿಚಿತ್ರ ಪುರುಷನಾರು ?

೨

"ನಮ್ಮನಿಮ್ಮ ಗುರುತಿತ್ತೊ ಮೊದಲು ? ಬಂದಿಲ್ಲಿ ಗುರುವಿನಂತೆ
ಕುರುಡುಗೊಂಬೆಗೇ ಕಣ್ಣು ಬರೆದೆ ತಿಳಿಗೊಂಡ ಕುರುಹಿನಂತೆ.
ಓ ತಾಯಿ ತಂದೆ ಶಿವವೆಂದೆ ನಿಮಗೆ ಕರುಗೊಳುವ ಅರುವಿನಿಂದೆ
ನೀವಿತ್ತ ಪಾಲು ನಮಗದುವೆ ಹಾಲು ಕರುಳಾಯ್ತು ಕರುವಿನಂತೆ"

೩

ಈ ಪುಷ್ಟಿ ತುಷ್ಟಿ ಹೊರಹೊಮ್ಮಿ ಚಿಮ್ಮಿ ನೆರೆನಂಬಿ ಗೊಂಬೆಯಾಗಿ,
ಪೊಸ ಜಗದ ಯುಗದ ಚವಲಂಬ ತೆರೆದು ಕರೆಯುವದು ಅಂಬೆಯಾಗಿ
ಒಳಗಿದ್ದ ಗಂಟು ಅರಳುತ್ತಲಿಹದು ಪೊಸಬಾಳ ಗಂಟೆಯಾಗಿ.
ಗಣಗಣನೆ ಬಂತು ಅಗಣಿತದ ಅಲೆಯು ಹೂಹೂವ ಕಂಟೆಯಾಗಿ.

---

ಭಾವ : ಶ್ರೀ ಅರವಿಂದರ ಮತ್ತು ಮದರ್ ಅವರ ದರ್ಶನಭಾವವು ಹೀಗೆ ಉದ್ದೀಪನಗೊಂಡಾಗ ಕವಿ ಕಂಡ ದರ್ಶನವೈಚಿತ್ರ್ಯ ವರ್ಣಿತವಾಗಿದೆ.

ಶಬ್ದಾರ್ಥ : ಕನ್ನನಾರು=ಕನ್ನನು+ಆರು=ಆರುಪಾರುಕಿಂಡಿ, ಛಿದ್ರ. ಚವಲಂಬ=ರೆಪ್ಪೆ, ಎವೆ.

# ೭ ಗುರು ನೆನೆದರೆ

ಗುರು ನೆನೆದರೆ ಸ್ಪಂದಿಸುತಿಹ
ನರ್ತಕಿ ಬಾ ಕುಣಿಯೆ
ನನ್ನೀ ಹೃದ್ರಂಗದ ಜವ-
ನಿಕೆ ತೆರೆ ಚಿನ್ಮಣಿಯೆ

೨
ಅಂತಃಪುರದೊಳು ಕೇಳಿಸು-
ತಿದೆ ನೂಪುರ ನಾದ.
ಏತರ ಒಸಗೆಯು ಇದು ? ಯಾ
ಹಿಗ್ಗಿನ ಪಡಸಾದ ?

೩
ಗಂಟೆಯ ನಾಲಗೆಯಂದದಿ
ಕರೆಯುವದಿದು ಗುಡಿಗೋ ?
ಅಮೃತಾನಾಡಿಯ ಸೂತ್ರಕೆ
ಕುಣಿಯುವೆ ನಿನ್ನಡಿಗೋ ?

---

ಭಾವ : ಶ್ರೀ ಗುರುಸ್ಮರಣೆ, ಗುಡಿಯ ಗಂಟೆಯ ಆಹ್ವಾನದಂತೆ ಉದ್ದೀಪಿಸಿದಾಗ ಜೀವನದಲ್ಲಿ ನರ್ತನದಂಥ ಸೊಗಸು ಮೂಡುವದು.

ಶಬ್ದಾರ್ಥ : ಜವನಿಕೆ=ಪರದೆ, ಪಡದೆ, ತೆರೆ. ನೂಪುರ=ಗೆಜ್ಜೆ ಕಾಲಂದುಗೆ. ಪಡಸಾದ=ಪಡಿಸಾದ=ಪ್ರತಿಶಬ್ದ

## ೮ ಮಹಾಪ್ರಸ್ಥಾನ

೧

ಅಗೊ ಜೀವ ಸ್ಫೋಟ ಆ ಸೋಮವಾರದಾ ಮಧ್ಯರಾತ್ರಿಯಲ್ಲಿ.
ಆಕಾಶಗಂಗೆ ಅಭಿಷೇಕ ಮಾಡೆ ಕೈಲಾಸ ಜಾತ್ರೆಯಲ್ಲಿ
ಮಧುವೇದವಾಣಿ, ಮಧುರಾಜರಾಣಿ ನಕ್ಷತ್ರಪುಂಜ ಕರೆಯೆ.
ಓಂಕಾರದೆದೆಯೆ ಝೇಂಕರಿಸಿದಂತೆ ನವಜೀವರಾಶಿ ಮೊರೆಯೆ.

೨

ನಾರಾಯಣಾಸ್ತ್ರ ಎಸೆದಂತೆ ಮೆರೆಯೆ ವಿಜ್ಞಾನಚಕ್ರದಲ್ಲಿ
ನವನೀತ ತೇಲೆ, ಘನಮನದ ಮೇಲೆ, ಸುರಮಥನ ತಕ್ರದಲ್ಲಿ
ಸಾವಿತ್ರ ಮಂತ್ರ ಯಮತಂತ್ರವನ್ನೆ ಸಂಯಮಿಸಿ ಅಮಲವಾಗಿ
ನಚಿಕೇತ ಅಗ್ನಿ ವಿಚಿಕೇತಿಸಿತ್ತು ನವಕಮಲ ಕಮಲವಾಗಿ.

೩

ಪಾತಾಳ ಶೇಷಮಸ್ತಕದ ಮಣಿಯು ಇಗೊ ಸ್ವರ್ಣಗರುಡನಾಗಿ
ದಿಗ್ದಂತಿ ನಾಗ ನೆಗೆದಂತೆ ಮೇಗೆ ಪಾರದದ ಹಂಸವಾಗಿ
ಯೋಗೇಶನಿಂದ ಧನುಧಾರಿಯಲ್ಲಿ ಅನಿಮೇಷ ಭೇದವಾಯ್ತು.
ಸುರವ್ಯಾಧನಯನದಾದರ್ಶವಾದ ಮೃಗಶೀರ್ಷ ವೇಧವಾಯ್ತು.

೪

ಆದಿತ್ಯಶಕ್ತಿ ಚಂದ್ರಮನ ಹೊಂದಿ ಕೌಮುದಿಯೆ ಭ್ರಮಿಸುವಂತೆ
ಸಾವಿರದ ಸೂರ್ಯ ನಕ್ಷತ್ರರಾಗಿ ತಮವನ್ನೆ ಶಮಿಸುವಂತೆ
ಶ್ರದ್ಧೆಯಲಿ ಶಿರವು, ಋತಸತ್ಯದರಿವು, ಎದೆ ಯೋಗ ಸಾಕ್ಷಿಯಾಗಿ
ಮಾಸೃಷ್ಟಿಯಿಂದ ಬರುತಿಹವು ಚೆಂದ ಶಿವಪಕ್ಷಿ ಪಕ್ಷಿಯಾಗಿ.

೫

ಕಳೇವರದ ನೀರಲ್ಲಿ ಶಾರದೆಯು ದೀಪ್ತಿ ತೊಳಗುತಿಹುದು.
ಹಣತೆ ತುಂಬ ನೇಹದಲಿ ನಗೆಯ ಹೂಬತ್ತಿ ಬೆಳಗುತಿಹುದು.
ಎದೆಯ ಹಾಲಿನಲಿ ಬಗೆಯ ಸಕ್ಕರೆಯ ಹರಳು ಕರಗುತಿಹುದು.
ತೇಜದಲ್ಲಿ ತಮ ಶಮಿಸಿ ಸೋಮ ರಸಿಕತೆಯೊಳರಗುತಿಹುದು.

೬

ದುರ್ಬಲತೆ ಸುಳ್ಳು, ಹುಸಿಯಾಸೆ ಜೊಳ್ಳು, ಸಾವೊಂದು ಪೊಳ್ಳು ಬದುಕು.
ಬಯಲಾಯ್ತು ಬಸಿರು, ಒಲವಾಯ್ತು ಹಸಿರು, ಕುಸುರಾಯ್ತು ಅದಕು ಇದಕು.
ನವಧರ್ಮಮೇಘ ಘನಘೋಷಗೊಂಡು ಅವತರಿಸಿ ದೇವ ವೃಷ್ಟಿ.
ಸುಕ್ಷೇತ್ರದಲ್ಲಿ ಮೊಗದೋರಲುಂಟು ಆನಂದದೊಂದು ಸೃಷ್ಟಿ.

೭

ಆ ಜ್ಞಾನದಾಚೆ ವಿಜ್ಞಾನ ಉದಯವಿದೆ ಗಂಟೆ ಬಾರಿಸಿತ್ತು.
ಚಾತುರ್ಥ ಸರ್ಗ ನೈಸರ್ಗ ಮಾರ್ಗ ಡಂಗುರವ ಸಾರಿಸಿತ್ತು.
ನೆರೆತೆರೆಯಲುಂಟು ಸೌಂದರ್ಯಸತ್ಯ ಸಜ್ಜನಿಕೆ ಇರುವ ನೆಲೆಯು,
ಸಿರಿಮನದ ವೈಭವದಿ ಮುಗಿಯಲಿಲ್ಲ ಈಶ್ವರನ ಸೃಷ್ಟಿ ಕಲೆಯು.

೮

ಎಂತು ಬಂತೊ ಜಡದಿಂದ ಪ್ರಾಣ ಉದ್ಭಿಜ್ಯ ಸ್ವೇದವಾಗಿ
ತರುಮರವು ಆಗಿ, ಕ್ರಿಮಿಕೀಟವಾಗಿ, ಪಶುಪಕ್ಷಿ ಭೇದವಾಗಿ ?
ಪಾಶವಿಕ ಗ್ರಂಥಿ ಬಿಡಿಸಿತ್ತು ಎಂತೊ ಮಾನವ್ಯದೊಂದು ರೀತಿ
ಮಾನವನ ಹೃದಯವನೆ ಯೋನಿಗೊಳಿಸಿ ಬರಲಿಹುದು ದೇವಜಾತಿ.

೯

ಈ ದೇಹವಿರಲಿ ಇಗೊ ತರುವೆ ಅಮೃತ ಹೃತ್ಕಲಶಪಾಣಿಯಾಗಿ.
ಬಾನುಲಿಯ ಕ್ಷೇತ್ರ ಸಿಡಿಲೆಂದು ಮೊರೆಯೆ ಆಕಾಶವಾಣಿಯಾಗಿ,
ಅಹ ಅರುಣಕಿರಣ ಆವರಣ ಹರಿದ ಸುಸ್ಫಟಿಕ ಕನಕದಂತೆ
ಅಗೊ ಎದ್ದ ಗೆದ್ದ ಋಷಿರಾಜ ತೇಜ ವೈದೇಹ ಜನಕನಂತೆ.

೧೦

ತಾಪಾರ್ತ ಜನಕೆ ನೆರಳಾಗಿ ನೀಡಿ ವಟವೃಕ್ಷವಾದ ಜೀವ ;
ತತ್‌ಬ್ರಹ್ಮದಲ್ಲಿ ಬೇರ್ಬಿಟ್ಟು ಇಳಿದ ಅಶ್ವತ್ಥದಂಥ ಭಾವ ;
ಧೀಪ್ರಳಯ ಜಲದಿ ತೇಲಾಡುತಿಹುದು ಅರಳೆಲೆಯಲೇನೊ ಒಂದು ;
ತಾನಾಗಿ ನಾಳೆ ನವಜೀವಕೋಟಿಯನೆ ಮೆರೆಯಲಿಹುದು ಬಂದು.

೧೧

ನವಜನ್ಮಯಜ್ಞ ಪರಿಪೂರ್ಣವಾಯ್ತು, ಅಜ್ಞಾನವಾಯ್ತು ಹವಿಯು.
ಅವಭೃತದ ಸ್ನಾನ ಈ ದೇಹದಾನ, ಗ್ರಹಮುಕ್ತನಾದ ರವಿಯು.
ಪುಷ್ಕರಿಣಿಯಲ್ಲಿ ಅರವಿಂದ ತತ್ತ್ವದವರೋಹವಾಗಿ ಸಾರ್ಥ,
ಶ್ರೀಮಾತೆಯವರ ಗುರುಪಾದವಾದವೋ ವಿಶ್ವಯೋಗತೀರ್ಥ.

೧೨
ಅರವಿಂದವೆಂಬ ಬರಿ ಹೆಸರಿನಲ್ಲೆ ಸೌಗಂಧ ತುಂಬಿ ಬಹುದು.
ಚಾರಿತ್ರ್ಯವನ್ನು ನೆನೆಸಿದರೆ ಸಾಕು ಬ್ರಹ್ಮಾಂಡ ಬಿಂಬಿಸುವದು.
ಆ ಒಂದೆ ರಾತ್ರಿಯಲಿ ಬಯಲು ತುಂಬಿತೋ ಪಾರಿಜಾತ ಕೀರ್ತಿ.
ಈ ವಿಶ್ವದೊಡನೆ ಒಂದಾಗಿ ನಿಂತಿತೋ ಆ ವಿರಾಟ ಮೂರ್ತಿ.

೧೩
ಪಾರ್ಥಿವದ ಗರ್ಭ ಭೇದಿಸುತ ಬಂತು ಅರ್ಭಕನ ಧ್ವನಿಯು ಒಂದು.
"ವಾಮನನ ಮುಂದಿನಾ ವಾಮದೇವ ಕ್ರಮಯೋಗದಿಂದ ಇಂದು.
ಶ್ರೀ ಕೃಷ್ಣ ಪಕ್ಷದಲಿ ಕಂಸರನ್ನು ಸಂಹರಿಸಿ ಮುಂದೆ ನಡೆದೆ.
ಅಮವಾಸೆ ಕಳೆದು ಚಿತ್ಕಲೆಯ ತಳೆದು ಪೌರ್ಣಿಮೆಯ ಹಾದಿ ಹಿಡಿದೆ."

---

ಭಾವ : ೫ ಡಿಸೆಂಬರ ೧೯೫೦ರಂದು ಶ್ರೀ ಅರವಿಂದರು ದೇಹಬಿಟ್ಟರು. ಅವರ ಸಮಾಧಿಯ ದರ್ಶನವನ್ನು ಮಾಡಿಕೊಂಡು ಆಶ್ರಮದಿಂದ ಮರಳುವಾಗ ಹೃದ್ರಂಗದಲ್ಲಿ ಅನುಪಮ ಪ್ರತಿಮೆಗಳ ಒಂದು ಜಾತ್ರೆಯೇ ನೆರೆಯಿತು. ಅವುಗಳನ್ನು ಭಾವಗಮ್ಯವಾಗಿ ಮಾಡಿಕೊಳ್ಳಲು ಕಲ್ಪನಾಸೂತ್ರದಿಂದ ಪವಣಿಸಿಯೂ ಹೆಣೆದುಕೊಂಡದ್ದಾಗಿದೆ. ಅವರ ಮಹಾಪ್ರಸ್ಥಾನ ಜೀವದ ಜ್ಞಾನಾವತಾರದ ಉತ್ಥಾನ ಎಂಬ ಪ್ರಭಾವ ಇಲ್ಲಿ ಉದ್ಭವಿಸಿದೆ. ಇದನ್ನು ಸಾವಧಾನದಿಂದಲೂ ಇಲ್ಲಿಯ ನಿಷ್ಠೆಯ ಸ್ವರೂಪವನ್ನು ಅರಿತುಕೊಳ್ಳಬೇಕೆಂಬ ಕುತೂಹಲದಿಂದಲೂ ಓದಿಕೊಳ್ಳಬೇಕು. ಈ ಓದಿನಿಂದ ಆವರವರ ಭಾವೋದ್ದೀಪನವಾದರೆ, ಅದೇ ಅದರ ಫಲ. ಇದರೊಳಗಿಂದ ತಿಳಿಯುವ ಸಾಲುಗಳಿಂದ ತಿಳಿಯದ ಸಾಲುಗಳಿಗೆ ಸಂಬಂಧ ಹೊಂದಿಸಿಕೊಳ್ಳಬೇಕು. ಆ ವಿಫಲ ಪ್ರಯತ್ನದಲ್ಲಿಯೂ ಸಾಫಲ್ಯದ ಬೀಜ ಕಾಣಬಹುದೆಂಬ ನಂಬಿಗೆಯಿದೆ.

ಶಬ್ದಾರ್ಥ: ವಿಚಿಕೀತಿಸು=ವಿಶೇಷ ಚಿಕಿತ್ಸೆಮಾಡು, ವಿ+ಚಿಕಿತ್ಸೆ. ಪಾರದ=ಪಾರಜ. ಆವಭೃತಸ್ನಾನ=ಪವಿತ್ರವಾಗುವ ಸ್ನಾನ. ಪುಷ್ಕರಣಿ=ಕಮಲಗಳ ಸರೋವರ.

ವಿಶೇಷ : ಪ್ರೊ॥ ಆರ್.ಜಿ. ಕುಲಕರ್ಣಿ - ಬೇಂದ್ರೆಯವರ ಮಹಾಪ್ರಸ್ಥಾನ ಕವನ ವಿಮರ್ಶೆ ಪುಸ್ತಿಕೆ, ಪ್ರಕಾಶಕರು, ಶ್ರೀ ಕೆ. ಎಸ್. ಅನಂತರಾಮಯ್ಯ, ಶ್ರೀ ದ. ರಾ. ಬೇಂದ್ರೆ ಸ್ನೇಹ ಮಂಡಲ, ೯೮೫, ೨೫ನೇ ಮುಖ್ಯ ರಸ್ತೆ, ಬನಶಂಕರಿ ೧ನೇ ಹಂತ, ೧ನೇ ಬ್ಲಾಕ್, ಬೆಂಗಳೂರು-೫೬೦ ೦೫೦.

## ೯ ಶ್ರೀಮಾತೆಗೆ

೧

ಮಾತುಗಳ ಮಾತೆ ನೀನುಽ
ಮಾತಿನಲಿ ಹೂತು ಬರಬಾರದೇನು ?
ಉಸಿರುಗಳ ಉಸಿರೆ ನೀನುಽ
ಉಸಿರಿನಲಿ ಹಸಿರಾಗಿ ಹರಿದೆ ನಾನು.

೨

ಕಣ್ಣುಗಳ ಬಣ್ಣ ನೀನುಽ
ಉಣ್ಣಿಸೌ ತನಿಬೆಳಕು-ಹಣ್ಣು-ಜೇನು.
ಕಿವಿಗಳಿಗೆ ಕಿವಿಯು ನೀನುಽ
ಕೇಳಿಸಲಿ ಬಾನ ಸವಿಯಾದ ತಾನು.

೩

ಬಗೆಯೊಳಿಹ ಜಗವೆ ನೀನುಽ
ಒಗುಮಿಗಿಸಿ ಬಾರೆ ಬಾ ಆಗಿ ಭಾನು
ಜೀವದೊಳು ದೇವಿ ನೀನುಽ
ನೀನಗ್ನಿ ಸೋಮ ನೀ ಭಾನು ನೀನು.

---

ಭಾವ : ಒಂದು ಪ್ರಾರ್ಥನೆ.

ಶಬ್ದಾರ್ಥ : ತಾನು=ಸ್ವರಗಳ ಆಲಾಪ. ಭಾನು=ಸೂರ್ಯ. ಒಗುಮಿಗಿಸಿ=ಹೆಚ್ಚಾಗುವಂತೆ ಮಾಡಿ. ಸೋಮ=ಅಮೃತ, ಚಂದ್ರ.



# ೧೦ ಬರುವಳು ಬರುವಳು

೧

ಬರುವಳು ಬರುವಳು ಬಂದೇ ಬರುವಳು
ಕಾದಿರಿ ಹಾಗೋ ಹೀಗೊ.
ನಸುಕಿನ ನಗೆಗಣ್ ಸೂಸುತ ಸುತ್ತೂ
ಈಗೋ ಇನ್ನಾವಾಗೋ.

೨

ಕಿಡಿಕಿಯಲ್ಲಿಣುಕುವ ನಗೆಮೊಗದಂತೆ
ತಾರೆಗಳಾಚೆಯ ನೀಲಿಮೆಯಂತೆ
ತನಿಸದೆ ಬರಿ ಸುರಿಯುವಳು ಬೆಳ್ಳಿಯ ಕಿರಣಗಳೇರಿ
ಹೊನ್ನಿನ ಹಡಗವ ಸೇರಿ.

೩

ಜಡಿವಳು ಸುರಿವಳು ತೊರೆಯುವ ಕರುಳು
ಯಾರಾರದೊ ಬಗೆಯರಳಿ,
ಜೀವವು ನಕ್ಷತ್ರವನುಗುಳುವುದು
ತೇಜಃಪುಂಜವು ಕೆರಳಿ.

---

ಭಾವ : ಮದರ್ ಅವರ ದರ್ಶನಕ್ಕಾಗಿ ನಿರೀಕ್ಷಿಸುತ್ತಿದ್ದಾಗ ಪ್ರದೀಪ್ತವಾದ ಭಾವಚಿತ್ರ.

ಶಬ್ದಾರ್ಥ : ನೀಲಿಮೆ=ನೀಲಿಬಣ್ಣ, ಸ್ನೇಹದ ಪ್ರತೀಕ.

## ೧೧ ಪಾದಪದ್ಮಕೆ ಪ್ರಾರ್ಥನೆ

೧
ಕಂಡುದನೆ ನಾ ಕಂಡು, ಕೇಳಿದ ಕೇಳಿ, ಮರುಳಿಗೆ ಕುಣಿದೆ,
ಉಂಡು ಉಂಡುದ ತಿಳಿಯದೆಯೆ ನಾ ತಣಿಯದೇನೇ ದಣಿದೆ.
ಬೇರೆ ಏತಕು ಮಣಿಯೆ ನಾ ಇಗೊ ಬಂತು ತಿಳಿವಿನ ಗಳಿಗೆ.
ಮಣಿಹವೆಂದೇ ಮಣಿವೆನಮ್ಮನ ಪಾದಪದ್ಮಂಗಳಿಗೆ.

೨
ಮೈಯೊಳಗೆ ಮರಸಂದು ಮಸಗಾಡಿದೆನು ಮಿಡುಕಿಗೆ ನಾನು.
ಮನದ ಬನದಲಿ ಬಿನದವಾಡಿದೆ ತನ್ನ ತಿಳಿಯದೆ ತಾನು.
ಬೆಣ್ಣೆ ಹಾಲಲಿ ಏಳುವಂದದಿ ಎತ್ತು ನಿನ್ನಾ ಬಳಿಗೆ.
ಅಡಿಗಡಿಗೆ ನಾ ಮಣಿವೆ ತಾಯಿಯ ಪಾದಪದ್ಮಂಗಳಿಗೆ.

೩
ಕತ್ತಲಿಸಲೆತ್ತೆತ್ತು ಕಣ್ಣಿನ ಹಾಗೆ ಹೊತ್ತನು ತೆರೆದೆ.
ಅದುವು ಮಣ್ಣಿನ ಮರೆಗೆ ಅಡಗಲು ತಿಂಗಳನ ನೀ ಕರೆದೆ.
ಇಲ್ಲ ರವಿಶಶಿಯೆನಲು ಬಾನಲಿ ಚಿಕ್ಕೆ ಬಳ್ಳಿಯೊಳರಳಿ,
ಬೆಳಕು ತೋರಿದ ಪಾದಪದ್ಮಂಗಳಿಗೆ ಮಣಿವೆನು ಮರಳಿ.

೪
ತೊಟ್ಟು ಹನಿ ರಸಕಾಗಿ ಹುಡುಕುವ ಹುಚ್ಚು ಹಿಡಿದಿಹ ಹುಳಕೆ
ಭ್ರಮರವೃತ್ತಿಯ ಬಿಡಿಸಿ ನುಗ್ಗಿಸು ಒಳಗೆ ಬೆಳಕಿನ ಕಳಕೆ.
ಅಳಿಗೆ ಕತ್ತಲು, ಹುಲಿಗೆ! ಹುಲುಸಿರಲಮ್ಮ ಬೆಳಕಿನ ಬೆಳೆಗೆ.
ಮಣಿವೆ ಬೆಳಗನೆ ತೋರೆ ತರಿವ ಈ ಪಾದಪದ್ಮಂಗಳಿಗೆ.

೫
ಬರಲಿ ಈ ಸಂಕ್ರಾಂತಿಯೊಳಗುತ್ಕ್ರಾಂತಿ ಜೀವದ ಕ್ರಾಂತಿ.
ಭ್ರಾಂತಿಯಳಿಯಲಿ ಬರಲಿ ಕರಣದ ಶಾಂತಿ ಚೈತ್ಯದ ಕಾಂತಿ.
ನಿನ್ನ ಕರುಣಾಕಿರಣ ಚಿಗುರಲಿ ಒಣಗಿದೆನೆ ನಾ ಚಳಿಗೆ.
ಗಳಿಗೆಗಳಿಗೆಗೆ ಮಣಿವೆನೇ ನಾ ಪಾದಪದ್ಮಂಗಳಿಗೆ.

೬
ಆಹ, ಸ್ವಾಹಾ ಎಂದೇ ಸ್ವಾಮಿನಿ ಬಂದೆ ತಂದೆಯು ತಂದೆ.
ಜನ್ಮ ಸರ್ವಸ್ವವನು ನೀಡುವ ಬೆಂಕಿ ಹೊತ್ತಿಸು ಎಂದೆ.
ಚಿತ್ತದರವಿಂದದಲ್ಲಿ ಹೊತ್ತಿಲಿ, ಮಣಿವೆ ಜೀವದ ತಳಿಗೆ.
ಚೈತ್ಯಮಂದಿರದಲ್ಲಿ ನೆಲೆಸಿದ ಪಾದಪದ್ಮಂಗಳಿಗೆ.

೭

ಗಂಗೆಯಂದದಿ ಬಿಳಿದು, ತಿಂಗಳ ಬೆಳಕಿನಂದದಿ ಬಿಳಿದು.
ಕತ್ತಲೆಯ ಹಂದರಕೆ ಹಬ್ಬಿದೆ ಬಿತ್ತು-ಬೆಳಕೇ ಬೆಳೆದು.
ಮಿಂಚಿನಂದದಿ ಬಿಳಿದು, ಅರಿವಿನ ಅಂಚಿನಂದದಿ ಬಿಳಿದು
ತಾಯಿ ತವರಿನ ಪಾದಪದ್ಮಂಗಳಿಗೆ ಮಣಿವೆನು ಇಳಿದು.

೮

ಒಂದೆ ಅಷ್ಟಕ ಬಂಧ ಕಷ್ಟವ ನಷ್ಟಗೊಳಿಸಲಿ ತಾಯಿ,
ಬಯಕೆ ಸಿಂಪಿಯ ಹುಳವು ಬಿಡುತಿದೆ ಸ್ವಾತಿಗಾಗಿಯೆ ಬಾಯಿ.
ತುತ್ತು ಮುತ್ತನು ನೀಡು ಸರಸತಿ ಲಕುಮಿ ಕಾಳಿಕೆ ಅಂಬೆ
ಪಾದಪದ್ಮಂಗಳಿಗೆ ಜೀವದ ಹಂಸನಾ ಬಲಗೊಂಬೆ.

---

ಭಾವ : ಒಂದು ಪ್ರಾರ್ಥನಾಷ್ಟಕ. ತಾಯಿಯವರ ಪಾದಗಳಿಗೆ ಮಾಡಿದ ವಂದನೆ.

ಶಬ್ದಾರ್ಥ : ಮಣಿಹ=ಕಾರ್ಯಭಾರ, ಕರ್ತವ್ಯ. ಮರಸಂದು=ನಿಶ್ಶೇಷವಾಗಿ, ಮರಗಟ್ಟಿ ಮಸಗಾಡು=ಕ್ರಿಯಾಶೀಲನಾಗು. ಬಿನದ=ವಿನೋದ, ಸಂತೋಷ. ಕಳ=ಕ್ಷೇತ್ರ, ಮೈದಾನ. ಅಳಿಗೆ=ಮಾಯವಾಗಲಿ, ಹುಲಿಗೆ=ಹುಲುಸಾಗಲಿ, ವೃದ್ಧಿಯಾಗಲಿ. ತಳಿಗೆ=ವಂಶಕ್ಕೆ. ಅಷ್ಟಕ=ಎಂಟುನುಡಿಯ ಬಂಧ.



# ೧೨ ಅದಿತಿ

೧

ಇವಳು ರುದ್ರರ ತಾಯಿ, ವಸುಗಳ ಮನೆಯ ಮಗಳೀಕೆ.
ತಂಗಿ ಆದಿತ್ಯರಿಗೆ ಇವಳಮೃತಕ್ಕೆ ಬಸಿರೀಕೆ.
ದಿವ್ಯಜನ್ಮದ ಮಂತ್ರಜಾತದ ದೈವದುಸಿರೀಕೆ.
ಎಲ್ಲರಿಗು ಅವರಾಕೆ, ಅರಳುವ ಹವಣು ಹಗಲೀಕೆ!

೨

ಪಾಶಮೋಚನೆ ಪಾಪನಾಶಿನಿ, ಬೇರೆ ಯೋಚನೆಯೇ
ನೀನೆ ಅರ್ಪಣತತ್ತ್ವದರ್ಪಣ, ಹುಸಿಯ ಯಾಚನೆಯೇ
ನಸುಕು ಮುಸುಕೋಸರಿಸಿ ಬಯಲಿಗೆ ಬರಲಿ ನೇಸರನು.
ನಮ್ಮನೀಶತೆ ಹರಿದು ಓಡಲಿ, ಮಾಡು ಈಶರನು.

೩

ಶರಣು ಭಕ್ತಿಗೆ, ಶರಣು ಯುಕ್ತಿಗೆ, ಶರಣು ಪರಮುಕ್ತಿ!
ತೊರೆದು ವಿಷಯಾಸಕ್ತಿ ತೋರಿ ವಿರಕ್ತಿ, ಪರಭುಕ್ತಿ
ಹೊಳೆದು ನಮ್ಮನು ತೊಳೆದು ನಾಡಿಗೆ, ಇಳೆಗೆ ಇಡಿ ಇಳೆಗೆ
ಇಳಿದು ಬಾ, ಎಬ್ಬಿಸಲು ಬಾ, ದಿವ್ಯತೆಯ ಬೆಳೆ ಬೆಳೆಗೆ.

೪

ಬಾರೆ ಭಗವತಿ ನಮ್ಮ ಜಗವತಿ ಕಾತರಿಸುತಿಹುದು.
ನಿನ್ನನೇ ನೆನೆನೆನೆದು ಜೀವವು ಚೇತರಿಸುತಿಹುದು.

---

ಭಾವ : ಒಂದನ್ನು ಹಲವೊಂದಾಗಿ ತುಂಡರಿಸಿ ಪಾಖಂಡವಾಗಿ ಬಿತ್ತರಿಸುವದು ದಿತಿಯ ಭಾವ; ದೈತ್ಯ ಮಾರ್ಗ!

ಶಬ್ದಾರ್ಥ : ಹವಣು=ಪ್ರಮಾಣ, ಅನೀಶತೆ=ಒಡೆಯನಿಲ್ಲದಿರುವಿಕೆ; ಬುಕ್ತಿ=ಉಪಭೋಗ, ಸುಖಾನುಭವ.

# ೧೩ ಓ ತಾಯಿ-ಮಾಯಿ !

೧

'ಓ ತಾಯಿ, ಮಾಯಿ, ಶಿವಜಾಯಿ, ಕಾಯಿ ನನ! ಯಾಕ ತೆರೆವೆ ಬಾಯಿಽ ?
ಯಾ ಹಾದಿಲಿಂದ ನಾ ಹೋದರೇನು, ಆಗ್ತೇನ ಅಲ್ಲೆ ನಾಯಿ.

೨

ಪ್ರತಿರೋಮಕೂಪದಾಗ ಕಾಮ ತುಂಬಿ, ತುಳಕ್ಯಾಡತಽದ ಇಲ್ಲಿ
ನೀ ಜಪ್ಪಿಸಿರಲು, ನಿನ ತಪ್ಪಿಸ್ಯಾರೆ ನಾ, ಹೋಗಬಲ್ಲೆನೆಲ್ಲಿ?'

೩

'ಹಾಂಗಲ್ಲೊ ಮಗನ, ನೀ ಭೋಗ ಬೇಡಿದಲ್ಲಲ್ಲು ಬಾಗಿಲಾಗಿ
ತೆರಿತಾವ ಹಾದಿ, ಅದಕಂತ ಕಾದಿ, ನಿನ ಮನಸೆ ಕನಸು ಆಗಿ.

೪

ತೆರದೇನಿ ಯೋಗ, ನಿನ ಹೃದಯದಾಗ, ಬರಲೊಲ್ಲ್ಯೊ ಬ್ಯಾಗ ಒಳಗ,
ಈ ಕಲಕುಮಲಕು ಆದಾಗ ನಿನಗ, ನಡದಽದ ಮ್ಯಾಲ ಕೆಳಗ.

೫

ಬಂದಾನ ಏನ ನನ ಕಂದ ಮನಿಗೆ, ಇಂದಾರೆ ಅನತ ಮನಕ
ಎಂದಾರೆ ಬಾರೊ. ಕಾದಿರುವೆ ಇಲ್ಲೆ, ನೀನಾಗಿ ಬರುವ ತನಕ.

೬

ಅಡ್ಡಡ್ಡ ಹಾದಿ ನೀ ಹೋದ ಮ್ಯಾಲೆ, ನಾ ಕಾದೆನೆಷ್ಟೊ ನಿನಗಽ
ಹಾಲ್ ಹಸಿವು ಹುಟ್ಟಿದಾಗ, ನೀನಽ ಬರತಿಯೋ ಚಿಂತಿ ಯಾಕ ನನಗಽ ?

೭

ಓಡ್ಯೋಡಿ ಹೊರಟ ಎಲೆ ಬಾಲ! ಕಾಲ ನಿನ ನೋಡಿ ನೋಡಿ ನಗನಽ ?
ನಿನ ಕಾಲ ಸೋತು ಬರುವಾಗ ಬಾರೊ, ನನಗೊಂದೆ ಹಾದ್ಯೊ ಮಗನಽ.

೮

ನನ ಬಣ್ಣ, ನಿನ್ನ ಕಣ್ ಮ್ಯಾಲೆ ಎರಚಿ, ಕಟ್ಟೇನೊ ಎಲ್ಲ ಹಾದಿ.
ನಿನ ಕಿವಿಗೆ, ನನ್ನ ಹಿರಿದನೀ ಕಟ್ಟಿ, ಬಿಟ್ಟೇನೊ. ಎಲ್ಲಿ ಹೋದೀ!

೯

ಆ ಗಾಳಿ ಬತಿಗೆ, ನೀ ಗೂಳಿ ಹಾಂಗ, ಅಡ್ಡ್ಯಾಡಿ ಹೇಳು ಏಸು?
ಮುಸುಗುಡುತ ಹೊರಟಿ ಬಯಲಾಗ, ನಿನ್ನ ಮುಗದಾಣ ಭಾಳ ಬೀಸು.

೧೦

ನಾಡಾಡಿ ಹಕ್ಕಿ ನೀನಲ್ಲೊ ಮಗನ, ಹೊಕ್ಕ್ಯಾಕ ಬೆಳ್ಕ್ಯಾಗಽ ?
ನಿನ ತಾಯಿ ಕಣ್-ಹನೀಮುತ್ತ ಸುರಸತಾಳ, ಮೂಸಽಸ ಕೊಳ್ಳದಾಗ.

೧೧

ನಿನ ಹಸೀ ಹಸಿವಿಗೇ ಹೇಸಿ ನೀನೆ ಬಂದಾಗ, ನನ್ನ ಮರಿಯೇ
ನನ ರುಚಿ, ನಿನಗ ಶುಚಿ ಅನಿಸಿ, ಹಸಿದು ಬಂದಾಗ ನಿನ್ನ ಮರೆಯೆ'

೧೨

'ಓ ಮಾಯಿ ಬಂದೆ, ಓ ತಾಯಿ ಬಂದೆ, ಓ ಕಾಯಿ ಕಾಯಿ ಬಂದೆ.
ನಿನ ಕಾಲ ನಾತ ಮೂಸಿಡುತ ಬಂದೆ'. ನಿನ ನಾಯಿಯಾಗಿ ಬಂದೆ.

೧೩

ಒಳಬಳಕಿ ಬೆಳಸ, ಹಸಿದೇನ ತಾಯಿ, ಸಣ್ಣಕ್ಕಿ ತಳಸಬೇಕS
ನಡುನಡುವೆ ನಕ್ಕು, ಮತಮತ್ತ ಕದ್ದು, ಕಣ್‌ಕುಡಿಲೆ ನೋಡಬೇಕS.

೧೪

ಕೈತುತ್ತ ಮಾಡಿ, ತುತ್ತುತ್ತ ಉಣಸುವಾಗ, ಸುತ್ತು ಆಡಬೇಕS
ನಡುನಡುವೆ ನಕ್ಕು, ಮತಮತ್ತ ಕದ್ದು, ಕಣ್‌ಕಡಿಲೆ ನೋಡಬೇಕS

೧೫

ನೀನು ಕೂಡ ಕೈಮರಿಗೆ ನಕ್ಕು, ಕಣ್‌ಕೆಂಪು ಮಾಡಬೇಕು.
ಏ ಸುಳ್ಳ ಅಂತ ಅಪ್ಪಿದರ, ತೊರಿದು, ನನ ತಂಪು ಮಾಡಬೇಕು.

೧೬

ಓ ತಾಯಿ ಬಂದೆ, ಮಾಮಾಯಿ ಅಂದೆ, ಈ ಬಾಯಿ ತುಂಬು ಒಂದೇ
ಮಕರಂದ ಪಾನದಾ ಝರೀ
ತೆರಿತೆರೀ ನಿನ್ನ ತಾವರೀ
ಬಂದSದ ತುಂಬಿಯಾ ಮರೀ'.

೧೭

ಅಂಬಿಕಾತನಯನ ನುಡೀ ನುಡಿತಾವ, ತೆರೀ ತೆರೀ ಎಂದೇ
ಓ ತಾಯಿ, ಮಾಯಿ, ಶಿವಜಾಯಿ, ಕಾಯಿ, ಈ ಬಾಯಿ ತುಂಬು ಒಂದೇ.

---

ಭಾವ : ಕನಸಿನ ಸಂಚಾರಗಳಲ್ಲಿ ತನ್ನ ಸ್ಥಾಯಿಯೇ ಚ್ಯುತಿಗೊಳ್ಳುವದೊ ಎಂಬ ಭಯ ವಿಹ್ವಲ ವಾತ್ಸಲ್ಯಭಾವದಲ್ಲಿ ಬಂದ ಲಾವಣ್ಯ ಲಹರಿ.

ಶಬ್ದಾರ್ಥ : ಕಲಕುಮಲಕು=ತಳಮಳ, ಕ್ಷೋಭೆ. ಕಾಲ=ಯಮ. ನೂತು=ನೋಯುವ ಸ್ಥಿತಿ. ಸಿವಿದನೀ=ಸುಮಧುರ ಧ್ವನಿ. ತಳಸು-ತಳಸು=ಕುಟ್ಟು ಶಿವಜಾಯಿ=ಅಂಬಾಭವಾನಿ, ದುರ್ಗೆ.

## ೧೪ ಪ್ರತ್ಯಕ್ಷ

೧
ಮನೋನ್ಮನೀ
ಬಾರೆ ಬಾ ಮನೋನ್ಮನೀ
ಮಹಾಮನರ ಕಣ್ಮಣೀ
ನಿನ್ನ ಕಣಿಗೆ ನೀನೇ ಕುಣೀ
ದೇವದೇವ ನಿನ್ನ ಧಣಿ
ಬಾರೆ ಬಾ ಮನೋನ್ಮನೀ.
೨
ಹುರುಳಿನ ಅರಳರಳಿಸಿ
ಮಾಲೆ ಮಾಡಿ ಕೊರಳಿಸಿ
ಹೃದಯವೀಣೆ ಬೆರಳಿಸಿ
ಕುಣಿಸು ಜಗಕಲಾಪಿನೀ
ಬಾರೆ ಬಾ ಮನೋನ್ಮನೀ
೩
ಒಲವು ಬಳ್ಳಿಯಾಗಿರೆ
ಜೀವ ಅತ್ತು ಬಾಗಿರೆ
ನಿನ್ನ ಪಾದ ತಾಗಿರೆ
ತುಂಬು ವಿಶ್ವವಾಹಿನೀ
ಬಾರೆ ಬಾ ಮನೋನ್ಮನೀ.
೪
ನಿನ್ನ ಪ್ರಾಣ ಅರ್ತಿಸಿ
ಚೆಲುವನ್ನೇ ಮೂರ್ತಿಸಿ
ಬಯಕೆಗಳನು ಪೂರ್ತಿಸಿ
ಬರಲಿ ದೇವ-ದ್ವೀಪಿನೀ
ಬಾರೆ ಬಾ ಮನೋನ್ಮನೀ.

೫
ಬಾಳಿನ ಒಡಲೊಳಿತಿಗೆs
ಭರತಿಯಾಗಲೊಮ್ಮಿಗೆs
ಪಯಣ ಬೆಳಿಸೆ ನೆಮ್ಮಿಗೆs
ಧ್ರುವವಾಗುತೆ ಕರೆಯೆ ನೀ
ಬಾರೆ ಬಾ ಮನೋನ್ಮನೀ
೬
ಒಕ್ಕೊರಲಿನ ಗೀತಿಗೆs
ಪ್ರೇರಕವಿಹ ರೀತಿಗೆs
ಜೀವನದೀ ನೀತಿಗೆ
ಸ್ವಚ್ಛಂದವಿಧಾಯಿನೀ
ಬಾರೆ ಬಾ ಮನೋನ್ಮನೀ.

---

ಭಾವ : ಈಶ್ವರ ಸ್ವರೂಪದಲ್ಲಿ ಮನಸ್ಸು ಐಕ್ಯವಾಗುವುದಕ್ಕಾಗಿ ಮಾಡಿದ ಪ್ರಾರ್ಥನೆ.

ಶಬ್ದಾರ್ಥ : ಕಣಿ=ಕಂಡದ್ದು ಭವಿಷ್ಯ. ಧಣಿ=ಒಡೆಯ. ಕಲಾಪಿನೀ=ಹೆಣ್ಣುನವಿಲು.

ವಿಶೇಷ : ಪ್ರತಿ ಅಕ್ಷ-ಎಂದರೆ ಕಣ್ಣಿಗೆ ಇದಿರಾಗಿ, ವಸ್ತುವಾಗಿ ಕಾಣುವದು. ಕಣ್ಣಿಗೆ ಪ್ರತ್ಯಕ್ಷ. ಹೀಗೆಯೇ ಬೇರೆ ಬೇರೆ ಇಂದ್ರಿಯಗಳಿಗೆ ಅವವುಗಳ ವಿಷಯ ಪ್ರತ್ಯಕ್ಷವೆ. ಕಿವಿಗೆ ಶಬ್ದ, ನಾಲಿಗೆಗೆ ರುಚಿ, ಮೈಗೆ ಸ್ಪರ್ಶ, ಹಾಗೆಯೆ ಮನಸ್ಸಿಗೆ ಸಂಕಲ್ಪಗಳು ವಿಕಲ್ಪಗಳು ಪ್ರತ್ಯಕ್ಷ. ಬುದ್ದಿಗೆ ಅದರ ಆ ಆ ಕಾಲದ ನಿಶ್ಚಯವು ಪ್ರತ್ಯಕ್ಷ. ಅಹಂಕಾರಕ್ಕೆ ತನ್ನ ದೇಹಾತ್ಮ ಬುದ್ದಿ ಪ್ರತ್ಯಕ್ಷ. ಚಿತ್ತಕ್ಕೆ ತನ್ನ ನೆನವು ಮರೆವು ಪ್ರತ್ಯಕ್ಷ. ಅಂತಃಕರಣಗಳಲ್ಲಿಯೇನು? ಇಂದ್ರಿಯಗಳಿಗೇನು?-ಒಂದು ದ್ವಂದ್ವ-ಸಂಧಿಪ್ರಕಾಶದಲ್ಲಿ ತನ್ನ ವಿಷಯಜ್ಞಾನವಾಗುತ್ತದೆ. ಎರಡು ಕಣ್ಣಿಗೆ ಕಾಣುವ ವಸ್ತು ಒಂದೇ. ಎರಡು ಕಿವಿಗೆ ಕೇಳಿಸುವ ಶಬ್ದ ಒಂದೇ. ಅವುಗಳಿಗೆ ದ್ವಿಧಾವೃತ್ತಿ ಮೂಲತಃ ಇಲ್ಲ. ಆದರೆ ಇಂದ್ರಿಯಾರ್ಥಗಳಂತೆಯೆ ಅಂತಃಕರಣಾರ್ಥಗಳೂ, ಕತ್ತಲೆ-ಬೆಳಕಿನ ಸಂತಾನ. ಕತ್ತಲೆ ಬೆರೆಯದ ಬೆಳಕಲ್ಲ ಅದು. ಶುದ್ಧ ಚಿತ್ತಕ್ಕೆಯೆ ಶುದ್ಧ ಸತ್ತ್ವದ ಪ್ರಕಾಶ ತೆರೆಯುವದು. ಈ ಪ್ರಕಾಶದ ಪ್ರಭುವಾಗಬೇಕಾದರೆ ಸತ್ತ್ವವನ್ನೂ ಅರಲಿನಂತೆ ಮಿದ್ದಿ ಮೂರ್ತಿ ಮಾಡಬಹುದಾದ ತತ್ತ್ವದ ಜಾಗೃತಿ ಬೇಕು.

## ೧೫ ದರ್ಶನ

೧

ಜನ್ಮ ಜನ್ಮದ ಸುಕೃತವೇ ಬಾ
ನನಗೆ ಬೆಂಬಲವಾಗುತ ;
ಜನ್ಮ ಜನ್ಮದ ದುಷ್ಕೃತವೆ ಬಾ
ಮಾತೃಚರಣಕೆ ಬಾಗುತ.

೨

ಯುಗಯುಗದ ವಾತ್ಸಲ್ಯವೇ ಬಾ
ಹೊಮ್ಮಿ ಹೊನಲಲಿ ಹರಿಯುತ;
ದೈವಗರ್ಭದ ಕೃಪೆಯೆ ಬಾ ಬಾ
ಕರೆದು ಅಮೃತವ ಕರೆಯುತ.

೩

ಕಿಂಡಿಯಿಂದ ಕಂಡೇವೆ.
ಕಣ್ ಕಾಣಿಕೆ ಎಂದು
ಜನ ಕಾದಿದೆ, ಮನ ಕಾದಿದೆ
ಕಾದಿದೆ ತನುಬಿಂದು.

೪

ಮೈ ಮಣ್ಣಿಗೆ
ಕುಡಿಗಣ್ಣಿಗೆ
ಈ ಹಣ್ಣಿಗೆ
ರಸಗೂಡಿಸು ಬಂದು.

೫

ರಣಘೋಷಕೆ
ಆಕ್ರೋಶಕೆ
ಬೇಸತ್ತೆವು ಇಂದು.
ಬಾ ತಾಯಿಯೆ ಬಾರಾ
ಚಂದಿರಮುಖ ತೋರಾ

---

ಭಾವ : ಶ್ರೀ ಮಾತೆಯವರ ಮಹಾದರ್ಶನದ ಕಾಲಕ್ಕೆ ತುಡಿದ ಭಾವ.

# ೧೬ ತಾಯಿಗೆ ಪ್ರಾರ್ಥನೆ

೧

ಒಮ್ಮಿದ್ದೆ ನೀನು, ಈಗಿಲ್ಲವೆಂದು ಹೇಗೆನಲಿ ತಾಯಿ ನಿನಗೆ ?
ನೀನಿದ್ದರಿರುವೆ, ಇಲ್ಲದರೊಳಿಲ್ಲ, ಹೀಗೆನುವೆ ನಾನೆ ನನಗೆ
ನಿನ್ನಿಂದ ಬಂದೆ, ನಿನ್ನಲ್ಲಿ ಬೆಳೆವೆ, ನಿನ್ನೊಳಗೆ ಸಾಗುವಂತೆ
ತಾ ಹೊತ್ತಲೆಂದು ಬಂದಂಥ ಬತ್ತಿ ದೀಪಕ್ಕೆ ಬಾಗುವಂತೆ.

೨

ನೀ ಮೈಯನೊಂದೆ ರೂಪಿಸಿದೆಯೇನು ಬಸಿರಲ್ಲಿ ರಕ್ತ ಸುರಿದು ?
ಹಸಿದಿರುವ ಬಾಯ್ಗೆ ನೀ ತಾಯೆ ಬಂದೆ ಹಾಲಾಗಿ ಎದೆಗೆ ಹರಿದು.
ಹಸು ಕರುವಿಗಾಗಿ ನಡೆದಂತೆ ದುಡಿದೆ; ನಡೆಗಲಿಸಲೆಂದು ದುಡಿಸಿ.
ಮುದ್ದಿಟ್ಟು ತುಟಿಗೆ ಮುದ್ದಾದ ಮಾತ ಮುದ್ರಿಸಿದೆ ಮನವ ನುಡಿಸಿ.

೩

ಭ್ರಮಿ ನಾನು ಭ್ರಮರ; ನಿಃಶಂಕ ನೀನು. ಈ ಜಾತಶಂಕಿಯನ್ನು
ಶಮಿಯಾಗಿ ಶಮಿಸಿ,ನೀನಾಗಿ ಹೊಸೆದು ಹೊತ್ತಿಸಿದೆ ಬೆಂಕಿಯನ್ನು
ದಮಿ ನೀನು, ನಾನು ದುರ್ದಮ್ಯ. ನಿನ್ನ ಕರುಣೆಯೊಳೆ ನನ್ನ ತೊಯ್ಸಿ
ಶ್ರಮಿ ನೀನು, ನಿನ್ನ ಶ್ರವ ಮಾಡಿಕೊಂಡೆ ಮೈಮುರಿಯೆ ನನ್ನ ಗೈಸಿ.

೪

ನೀ ತೇಜಃಪುಂಜ, ನಾನೊಂದು ಚುಕ್ಕಿ, ಬಸಿರುಕ್ಕಿ ಹೊರಗೆ ಬಿದ್ದೆ
ಇನ್ನೂನು ಭ್ರಮಣ ನಡೆದಿಹುದು, ತುಸುವು ಹರೆದಿಲ್ಲ ಹುಟ್ಟುನಿದ್ದೆ
ಬಾನಗಲದಲ್ಲು ನನ್ನಗಲದಂತೆ ನನ್ನನ್ನು ಕೂಡಿಕೊಂಡು
ಹೊರಟಿರುವೆ ಎತ್ತೊ ಬಿಡದೆನ್ನ ನಿನ್ನ ಆ ರಥಕೆ ಹೂಡಿಕೊಂಡು.

---

ಭಾವ : ತನ್ನಲ್ಲಿ ಉದ್ಭವಿಸುವ ಜ್ಞಾನಕ್ಕೆಂತೊ,ಹಾಗೆಯೆ ಭೌತ ದೇಹ ಪ್ರಾಣ-ಮನಗಳಿಗೂ ಇವಳೇ ತಾಯಿ. ಜೀವರಥದಲ್ಲಿ ಮೂರ್ತವಾದವಳು ಆ ಭಗವತಿ.

ಶಬ್ದಾರ್ಥ : ಶಮಿ=ಯೋಗಿ, ಶಾಂತ ಮಾಡಬಲ್ಲವನು. ದಮಿ=ಇಂದ್ರಿಯ ನಿಗ್ರಹ ಮಾಡಬಲ್ಲವನು. ದುರ್ದಮ್ಯ=ಇಂದ್ರಿಯ ನಿಗ್ರಹ ಇಲ್ಲದವನು. ಶ್ರವ=ಕೇಳಿಸುವಿಕೆ. ಶ್ರಮಿ=ಕಾರ್ಯನಿರತಳು.

# ೧೭ ತಾಯ ನಗೆ

೧

ಏನು ನಗೆಯೆ ನಿನ್ನ ಮೊಗದ ಮೇಲೆ ಮೆರೆವುದು !
ಕಾಣದೊಂದು ಲೋಕವನ್ನೆ ಕಣ್ಣಮುಂದೆ ತೆರೆವುದು ;
ಏನು ಚಿತ್ರ ಇದು ವಿಚಿತ್ರ ಚಮತ್ಕಾರವಾಗಿದೆ;
ನನ್ನ ಕುಡಿದು ಕಣ್ಣಿನಿಂದ ಒಳಗೆ ಹೊಗುವ ಹಾಗಿದೆ.

೨

ಹಾಳೆಯಲ್ಲ; ಬಾಳೆ ಇಲ್ಲಿ ಬೆಳಕುದುಂಬಿ ಬಂದಿದೆ ;
ಗೊಂಬೆಯೇ ? ಸಜೀವ ಬಿಂಬ ಅರಿವು ತುಂಬಿ ನಿಂದಿದೆ ;
ಶಾಂತಿನಿಧಿ ಗಭೀರಮೌನ ಇಲ್ಲಿ ಕಣ್ಣ ತಾಳಿದೆ ;
ಮುಚ್ಚಿದೆರಡು ತುಟಿಗಳಲ್ಲಿ ಅರ್ಥವೆಲ್ಲ ಹೂಳಿದೆ.

೩

ನೇಹವೆರೆದು ಏನೊ ತೆರೆದು ಭಾವ ಹೊತ್ತಿದಂತಿದೆ ;
ಆಳದೊಳಗೆ ಏನೊ ಒಂದು ಪೊಚ್ಚಮುತ್ತಿನಂತಿದೆ ;
ತೆರೆಯೆ ಮರೆಯು, ಮರೆಯೆ ತೆರೆಯು, ಇದರ ಮಾಟ ಹೀಗಿದೆ.
ಕಂಡೆನೆಂಬ ಒಂದು ಕನಸು ಎಲ್ಲೊ ಮಾಯವಾಗಿದೆ.

೪

ಸಾವಿನೊಂದು ಪೊರೆಯ ತೊರೆದ ಜೀವ ಮೆರೆಯುವಂತೆಯೆ
ನೋವು ಗೀವು ಸುಳ್ಳು ಎನಿಸಿ ಹಿಗ್ಗು ಹರಿಯುವಂತೆಯೆ
ಇರವಿನೊಂದು ಸುಳಿಯ ಒಳಗೆ ಬೇರೆ ಸಿರಿಯು ತೆರೆವುದು ;
ಇಲ್ಲವೆನಿಸಿದೊಂದು ಬಾಳ ಅಹುದೆನುವೊಲು ಕರೆವುದು.

೫

ನಿನ್ನ ನಗೆಯ ಬೆಳಕಿನಲ್ಲಿ ಜಗಕೆ ಬೇರೆ ಬಣ್ಣವು
ಬರಲು; ನನ್ನ ಜೀವನಯನ ಬೇರೆ ಉಣಿಸನುಣ್ಣವು.

---

ಭಾವ : ದಿ ಮದರ-ಶ್ರೀ ಮಾತೆಯವರ ಭಾವಚಿತ್ರ ಕಂಡಾಗ; ಜಗದ್ವಿಖ್ಯಾತ ಲಿಯೊನಾರ್ಡೊ ಡಾ ವಿನ್ಸಿ ಬರೆದ 'ಮೋನಾಲಿಸಾ' ಚಿತ್ರದ ನೆನಪು ಉದ್ದೀಪನ ಕೊಟ್ಟಾಗ ಕವನದ ರಚನೆ ಆಯಿತು.

# ೧೮ ದಿ ಮದರ್

*"It is through the Mother that all things are attained"*

*- Sri.Aurobindo*

೧

ಮಾಯೆಯನೆ ಮೊಲೆಗೊಳಿಸಿ ಹಾಲ್ಗುಡಿಸಿ, ಈ ತಾಯಿ
ಗಾಯತ್ರಿ ಮಂತ್ರಕ್ಕೆ ಭಾಷ್ಯ ಬರೆದವಳು
ಅಶ್ವಪತಿಯ ಉಪಾಸ್ಯ ದೇವತೆಯು ಸಾವಿತ್ರಿ!
ಸೂರ್ಯನಾಚೆಯ ಸೋಮಹಾಸ್ಯ ಕರೆದವಳು

೨

ಸತ್ಯವಂತರ ಮರ್ತ್ಯ ಡಿಂಭಗಳ ಗೊಂಬೆಯಲಿ
ಶಮರಮಿತ ನವ ಬಿಂಬ ಸೃಷ್ಟಿ ಮೆರೆದವಳು
ಮಾರ್ತಾಂಡ ಮಂಡಲದ ಅಂಡವನು ಪುಟಗೊಳಿಸಿ
ಹಂಸಜಾತಿಯ ಜೀವಜಾತಿ ತೆರೆದವಳು.

---

ಭಾವ : ಶ್ರೀ ಮಾತೆಯವರ ಅದ್ಭುತವಾದ ಉದ್ಭವಶಕ್ತಿಯನ್ನು ಕುರಿತು.

ಶಬ್ದಾರ್ಥ : ಮಾರ್ತಾಂಡ=ಮಾರ್ತಂಡ=ಸೂರ್ಯ





## ೧೯ ಶ್ರೀಮಾತೃಶ್ರೀಗೆ

೧
ನಿನ್ನ ನೋಟವೆ ಹಾಲು
ತಾಯಿ ನೀನು.
ಕಂಗಳಿಂದಲೆ ಕುಡಿವೆ
ಕೂಸು ನಾನು.
೨
ಕಂಗಳಿಂದಲೆ ನುಡಿವೆ
ತಾಯಿ ನೀನು.
ನನ್ನ ಕಣ್ಣೇ ಕಿವಿಯು
ಕವಿಯು ನಾನು.

---

ಭಾವ : ಶ್ರೀ ಮಾತೆಯವರ ದೃಷ್ಟಿ ಸೋಂಕಿದಾಗಿನ ಎಚ್ಚರದ ವರ್ಣನೆ.

ವಿಶೇಷ : ಶ್ರೀ ಮೀರಾ ಮಾತೆಯವರ ಜನನ ೨೧-೨-೧೮೭೮; ನಿರ್ವಾಣ ೧೭-೧೧-೧೯೭೩. ಬೇಂದ್ರೆಯವರು ಶ್ರೀ ಅರವಿಂದ ಹಾಗೂ ಶ್ರೀ ಮಾತೆಯವರ ಪ್ರಥಮ ಮಹಾದರ್ಶನ ಪಡೆದದ್ದು ೨೧ ಫೆಬ್ರುವರಿ ೧೯೪೩ರಲ್ಲಿ. ಆಗ ಅವರ ಭಾವ ''ಶ್ರೀ ಶ್ರೀ ಗುರು ಅರವಿಂದಾರ್ಪಣಮಸ್ತು ಹಾಗೂ ಶ್ರೀ ಶ್ರೀ ಮಾತೃ ಪ್ರಸಾದೋಸ್ತು'' ಎಂಬುದೇ ಆಗಿತ್ತು. ಅದು ನಿಷ್ಠೆಯಾಗಿ ಸರ್ವಸಂಪೂರ್ಣ ಸಮರ್ಪಣದಲ್ಲಿ ಐಕ್ಯ ಹೊಂದಿತ್ತು.

# ೨೦ ನಾಲ್ವರು ತಾಯಂದಿರು

ಬಾರೆ ಬಾ ಮಹೇಶ್ವರೀ
ಬಾ, ಬಾ, ಬಾ, ಬಾ.
ಬಾರೆ ಬಾ ಮಹೇಶ್ವರೀ
ಮಹಾಕಾಳಿ, ಮಹಾಲಕ್ಷ್ಮಿ
ಬಾ ಮಹಾಸರಸ್ವತೀ
ಇಹುದು ನಿಮಗೆ ಶಾಶ್ವತಿ ॥ ಪಲ್ಲವಿ ॥

೧

ಹಗಲು ಇರುಳು ನಿಮ್ಮ ಕೂಟ
ಅರಿವೆ ನಿಮಗೆ ದಿನದ ಊಟ
ಬೆಳಕೊಗೆವುದು ಒಂದು ಆಟ
ಚಿದಾನಂದ ಲಹರಿ ಬಾ
ಸದಾಶಿವನ ಗೌರಿ ಬಾ
ನಿಮ್ಮ ಮಗುವು, ಹುಸಿಯ ನಗುವು
ಒಗಿಸಿ,ಮಿಗಿಸಿ ಬರುತಿರೆ
ನೀವೆ ಕರೆಯದಿರುತಿರೆ
ಛಂದವೇನು ನೀವೆ ಹೇಳಿ?
ಕೂಸು ನಾನು ಹೇಳಿಕೇಳಿ.
ನೀವೇ ನನಗಹುದು ಹಸಿಯು
ಬೆಳೆದೀತೇ ಒಣಕೆ ಸಸಿಯು?
ನಿಲ್ಲಿರವ್ವಾ ನಿಲ್ಲಿರಿ
ಕೃಪಾದೃಷ್ಟಿ ಚೆಲ್ಲಿರಿ.

೨
ತಾಳುವೆವೇ ನಿಮ್ಮ ರಾಸ?
ಕುಣಿಕುಣಿಯುವ ಅಟ್ಟಹಾಸ
ಅಹಾ ಏನು ಮಹಾಭಾಸ!
ಬಾ ಎನ್ನುವ ಬಾಯಿಯೇ
ನಮಗೆ ಇಲ್ಲ ತಾಯಿಯೇ.
ನಿಮ್ಮ ಭಯಾ ನಮಗಭಯಾ
ಮಹಾಕಾಳಿ ಬಂದಿರೇ
ವಿಶ್ವಪ್ರಾಣಮಂದಿರೇ!
ಕೋಟಿ ಸಲುವು ಹುಟ್ಟಿ ಸತ್ತು
ಧಿಮಿತಿಕಿದಿಟ ಎಂದತ್ತು
ಆದರೇನು ನೀವೇ ಬಲ
ನೀವೇ ಹೊಲ ನೀವೇ ಚಲ
ಕಲಿಸಿರವ್ವ ಕಲಿಸಿರಿ
ಹಸುಹರಣವ ಬಲಿಸಿರಿ.
೩
ವಿಷಮದಲ್ಲೆ ಇಹುದು ಸಮ
ವಿಶ್ರಾಂತಿಯೆ ನಿಮ್ಮ ಶ್ರಮ
ಸಂಭ್ರಮದೊಳು ತೊರೆದು ಭ್ರಮ
ಬಾರೆ ಬಾರೆ ಬಾ ರಮಾ
ಅಂತರಂಗಪ್ರಿಯತಮಾ
ನಿಮ್ಮ ಕಂದ ನಿಮ್ಮ ಅಂದ
ಆಟಪಾಟವಾಡಲಿ
ನವೀನ ಛಂದ ನೋಡಲಿ.
ಬನ್ನಿರವ್ವ ಬಯಸಿ ಕರೆವೆ
ನಾನು ನಿಮ್ಮನೆಂತು ಮರೆವೆ?
ತನುಮನವೂ ನಿಮ್ಮ ಮನೇ
ನಾನು ಕೂಡ ನಿಮ್ಮವನೇ
ಅಲ್ಲವೇನೆ? ಬನ್ನಿರೇ
ಜಯ ಜಯ ಜಯವೆನ್ನಿರೇ

೪

ನೀನೆ ಪರಾ ನೀನಪರಾ
ನೀ ಭೈರವಿ ನೀ ತಾರಾ
ನೀನು ತ್ರಿಪುರಸುಂದರಾ
ಬಾರೇ ಬಾ ಭಾರತೀ
ಎತ್ತು ಆತ್ಮದಾರತೀ
ನಿಮ್ಮ ಕರ್ಮ ನಮ್ಮ ಧರ್ಮ
ಕೈ ಮೈಯೊಳು ಬೆಳೆಯಲಿ
ಕರಣಗಳಲಿ ಉಳಿಯಲಿ

ನಾಲಗೆಯಲಿ, ನಾಳದಲ್ಲಿ
ಜೀವಭಾವದಾಳದಲ್ಲಿ
ನೀವೇ ಜಗವಾಳುವಲ್ಲಿ
ನಿಮ್ಮುಸಿರೇ ಬಾಳುವಲ್ಲಿ
ಅಂಬಿಕಾತನಯನಾ
ನಿಲಿಸಿರವ್ವ ದಿನ ದಿನಾ.

---

ಭಾವ : ಜೀವನದ ನೆಲೆ ಕಟ್ಟುತ್ತಿರುವ ನಾಲ್ಕು ಮಾತೃಶಕ್ತಿಗಳನ್ನು ಸ್ವಾಗತಿಸುವ ಗೀತ.

ಶಬ್ದಾರ್ಥ : ರಾಸ=ಕೃಷ್ಣ ಮತ್ತು ಗೋಪಿಕಾಸ್ತ್ರೀಯರ ಶೃಂಗಾರ ನರ್ತನ. ಹರಣ=ಪ್ರಾಣ. ಕರಣ=ಇಂದ್ರಿಯ. ನಾಳ-ನಾಲ-ಪೊಳ್ಳು ಪ್ರದೇಶ, ನಲಿಕೆ. ಒಗಿಸಿ=ಹೊರಸೂಸಿ. ಮಿಗಿಸಿ=ಹೆಚ್ಚಾಗಿ. ಹಸುಹರಣ=ಪಶುತ್ವದ ಹರಣ. ಪರಾ ಅಪಾರ=ಉತ್ತರ, ಉತ್ತಮ ಎಂಬ ನೆಲೆಯ ಶಕ್ತಿಗಳು.

ವಿಶೇಷ : ಐದು ಐದೆಯರ ತನಯರಾದ ಬೇಂದ್ರೆಯವರು ಶ್ರೀಮಾತಾರವಿಂದ ಮಾರ್ಗದ ನಾಲ್ವರು ತಾಯಂದಿರನ್ನು ಕುರಿತು ರಚಿಸಿದ ಪ್ರಾರ್ಥನೆ. ಮಹೇಶ್ವರಿ=ಕಲ್ಯಾಣಕಾರಕ. ಮಹಾಕಾಳಿ=ಶಕ್ತಿದಾಯಕ. ಮಹಾಲಕ್ಷ್ಮಿ=ಸಂಪತ್ತು ದಾಯಕ ಮತ್ತು ಮಹಾಸರಸ್ವತಿ=ಸಕಲವಿದ್ಯಾವರ್ಧಿನಿ. ಇವರೆಲ್ಲರ ಕೃಪಾದೃಷ್ಟಿ ಮಾನವರ ಮೇಲೆ ಬಿದ್ದು ಅವರಲ್ಲಿಯ ಪಶುತ್ವದ ಹರಣವಾಗಬೇಕು. ತನು, ಮನ ಒಂದಾಗಬೇಕು. ಸರ್ವರ ಕಲ್ಯಾಣಕಾರಕ ನಡೆ,ನುಡಿ; ಜೀವ, ಭಾವ ಆಳದಲ್ಲಿ ಸ್ಥಿರವಾಗಬೇಕು. ಆಗ ಜಾಗತಿಕ ಸಾಮರಸ್ಯ ಸಾಧ್ಯ ಎಂದಿದ್ದಾರೆ ಅಂಬಿಕಾತನಯದತ್ತ.

# ೨೧ ಏಳು-ಬಯಕೆಯ ಬಳ್ಳಿಯೆ

೧

ಏಳು-ಬಯಿಕೆಯ ಬಳ್ಳಿಯೇ
ಅರಳೇಳು ಹೃದಯದ ಆಳಕೆ.
ಜೀವರಸ ಚಿಮ್ಮೇಳು  ಹೂ ಹೊ-
ಮ್ಮೇಳು ದೈವದ ಮಾಳಕೆ
ಸೂರ್ಯಚಂದ್ರಗೆ ಸ್ರವಿಸಲಿ,
ಕೃಪೆಯೀವ ಕರುಣೆಯು ದ್ರವಿಸಲಿ,
ನಾವಲ್ಲ ಮಣ್ಣಿನ ಹುಡಿಗಳು
ಬರಿಗಂಪ ಬೀರುವ ಕುಡಿಗಳು
ನಾವು ಇರುವೆವು ಧಿವ್ಯಭಾಗ್ಯದ ಚುಕ್ಕೆಗಟ್ಟಿದ ಗುಡಿಗಳು.

೨

ಕರೆಯು ಬಂದಿದೆ ದೂರದಿಂದಲೆ ಬರಲಿ ಮುಂದಕೆ ಸಾಗಲಿ
ಏಳಿ ಹೊತ್ತಿನ ಪೀಳಿಗೆ
ಬಂತು ಬೆಳಕಿನ  ಏಳಿಗೆ
ನೇತ್ರಗಳ ಜೀವಂತಜ್ಯೋತಿಯ ತಾಯಿ ಕರೆವಳು ಬಾಳಿಗೆ.
ಏಳು-ಬಯಕೆಯ ಬಳ್ಳಿಯೇ.

---

ಭಾವ : ಸೃಷ್ಟಿಯ ಬಂಧದಲ್ಲಿ ವಮುಕ್ತಿವಿಲಾಸದ ಬೀಜವೊಂದು ಬಯ್ತು-ಕೊಂಡಿರುತ್ತದೆ. ಅದನ್ನು ಮೊಳಕೆಯೊಡೆಯುವಂತೆ ಮಾಡುವವಳು ಭಗವತಿ. ಅದು ಶ್ರೀ ಗುರುಕಾರುಣ್ಯ ದೃಷ್ಟಿ

ಶಬ್ದಾರ್ಥ : ಮಾಳ=ಉನ್ನತ ಹಂತ. ಸ್ರವಿಸು-ಶ್ರವಿಸು=ಹನಿಹನಿಯಾಗಿ ಉದರು, ಚಿಮ್ಮು, ಹರಿ.

## ೨೨ ಭಾರತನವಶಕ್ತಿ

"Oh My sweet Lord, teach me to be the instrument of Thy Love"

**-The Mother**

ಹೃಜ್ಞಾತೇ! ಚಿನ್ಮಾತೇ!
ಹೃನ್ಮಾತೇ, ಚಿಜ್ಞಾತೇ! ಭಾರತ ನವಶಕ್ತಿ!
ನಮ್ಮಾತ್ಮವೆ, ಪರಮಾತ್ಮವೆ, ಕರುಣಿಸು ತವ ಭಕ್ತಿ ॥ಪಲ್ಲವಿ॥

೧
ಜಯವೇ, ನಯವೇ
ಹೊಸ ಅಭಯವೆ, ಶುಭೋದಯವೆ, ಮಂಗಲಮಯವೇ! ॥ಭಾರತ ನವಶಕ್ತಿ......॥

೨
ಎಂದೆಂದೂ ಈ ಮಕ್ಕಳ ಕೈ ಮೈ ಹಿಡಿದಾಕೇ!
ಯಾರಾರಿಗೊ ಬಾಗಿದರೂ ನಮ್ಮೆದೆ ಬಿಡದಾಕೇ!
ಆಪತ್ತನು ತಡೆದಾಕೇ, ಜೊತೆಜೊತೆ ನಡೆದಾಕೇ! ॥ಭಾರತ ನವಶಕ್ತಿ......॥

೩
ಹೊಸ ನಗೆಯಿದೆ ತವ ಮುಖದಲಿ
ಬಿಡುಗಡೆಯಿದೆ ಸಮ್ಮುಖದಲಿ
ನಮಿಸುವೆವಿದೊ ಒಮ್ಮುಖದಲಿ, ಭಾರತವನಶಕ್ತಿ! ॥ಭಾರತ ನವಶಕ್ತಿ......॥

೪
ತೆರೆದಿರುವೀ ಬಿಡುಗಡೆಯಾಗಲಿ ಜಗದುದಯ-
ಹಿಗ್ಗುತಿರಲಿ ಸನ್ಮಹಿಮೆಯ ನವದಿಗ್ವಲಯ-
ನಾಡ-ನಾಡಿಗಿದು ನೀಡಲಿ ಬಾಳ್ಕಾಣಿಕೆಯ- ॥ಭಾರತ ನವಶಕ್ತಿ......॥

೫

ಅನುಗಾಲವು ಹಿರಿಗುರಿಯಲಿ ಭರವಸೆ ಬರುವಂತೆ
ನಿನ್ನಾತ್ಮದ ಒಳಮೂರ್ತಿಯ ಮೂಡಿಸುತಿರುವಂತೆ
ಜನಜನಕೂ ಗೆಳೆ-ನಾಡಿದು ಆತ್ಮವ ತೆರೆವಂತೆ ॥ಭಾರತ ನವಶಕ್ತಿ......॥

೬

ನಡೆ ನಡಿಸೌ, ನುಡಿ ನುಡಿಸೌ, ಮಾತೆಯ ಮಂತ್ರೋಕ್ತಿ
ಅರವಿಂದರ ಹೃಜ್ಞಾತೇ, ಋತತಂತ್ರದ ಯುಕ್ತೀ! ॥ಭಾರತ ನವಶಕ್ತಿ......॥

(ಇದಕ್ಕೆ 'ಹೃಜ್ಞಾತೇ ಚಿನ್ಮಾತೇ' ಎಂಬ ಶೀರ್ಷಿಕೆ ಇತ್ತು)

---

ಭಾವ : ಆಗಷ್ಟ ೧೫, ೧೯೪೭-ಭಾರತ ಸ್ವಾತಂತ್ರ್ಯ ಪಡೆದ ದಿವಸ. ಆಗಷ್ಟ ೧೫, ೧೮೭೨ ಶ್ರೀ ಅರವಿಂದರ ಜನ್ಮ ದಿನ. ಮನುಷ್ಯನನ್ನು ಸನ್ಮಾರ್ಗದಲ್ಲಿ ನಡೆಸಿಕೊಂಡು ಹೋಗುವ ಸಿಂಹಶಕ್ತಿ ಶ್ರೀ ಅರವಿಂದರ ಹೃದಯಾರವಿಂದದಲ್ಲಿ ಮೂರ್ತಗೊಂಡಿದೆ ಎಂಬ ಪ್ರೇರಣೆಯಿಂದ ರಚಿಸಿದ ಕವನ. ಈ ಸಿಂಹಶಕ್ತಿ ನಾಳಿನ ಜಗತ್ತಿನ ಜೀವಗಳನ್ನೂ ರೂಪಿಸುವ ಸಾಮರ್ಥ್ಯ ಉಳ್ಳದ್ದಾಗಿದೆ ಎಂಬ ಶ್ರದ್ಧೆಯಿಂದ ಹೊರಹೊಮ್ಮಿದ ಪ್ರಾರ್ಥನೆ ಇದು.

ಶಬ್ದಾರ್ಥ : ಋತ ತಂತ್ರ=ಸತ್ಯದ ಹೊಂದಾಣಿಕೆ.

ವಿಶೇಷ : ಈ ಕವನ ಮೊದಲು ಪ್ರಕಟವಾದದ್ದು 'ಹೃದಯ ಸಮುದ್ರ' ಸಂಕಲನದಲ್ಲಿ. ಆಗ ಇದರ ತಲೆಬರಹ 'ಹೃಜ್ಞಾತೇ ಚಿನ್ಮಾತೇ' ಎಂದಿತ್ತು. ಮತ್ತೆ ಅದು 'ಶ್ರೀಮಾತಾ' ಸಂಕಲನದಲ್ಲಿ ಪ್ರಕಟಿಸಿದಾಗ 'ಭಾರತ ನವಶಕ್ತಿ' ಎಂಬ ತಲೆಬರಹ ಕೊಡಲಾಗಿದೆ.



---

೩೨ ಹೃದಯಸಮುದ್ರ - ಕವನ ಸಂಕಲನ : ಸಂ. ವಾಮನ ಬೇಂದ್ರೆ



## ೨೩ ಶ್ರೀತಾಯಿಗೆ

೧
ಹಾರುಹಕ್ಕಿಯ ತೆರದಿ ಬರುವೆ ಹಾರಯಿಸುತ್ತ
ನಿನ್ನ ನೀಲ ವಿಶಾಲ ಗಗನದಲ್ಲಿ.
ತಾಯಿ ಎನಿತೇ ನೀನು ದೂರವಿದ್ದರು ಏನು?
ನನಗೆ ಎನಿಸುವೆ ನೀ ಸಮೀಪದಲ್ಲಿ.
೨
ಚಿಕ್ಕ ಬಾನಿನೊಳೊಂದು ಚುಕ್ಕಿ ನಾನೇ ತಾನು
ನಿನ್ನ ಹಿಗ್ಗಿಗೆ ನನ್ನ ಹಕ್ಕಿಗೊಳಿಸಿ,
ಕೂಗೆಂದೆ ಹಾಡೊಂದು ಕಂಠ ಹೃದಯದೊಳಿಕ್ಕಿ
ಆಟಕ್ಕೆ ಗರಿ-ಮೈಯ ತೊಡಿಗೆ ಕೊಡಿಸಿ,
೩
ರೆಕ್ಕೆ ಬಳಲಲು ನಾನು ಮೆಲ್ಲಗಿಳಿಯುತ ಕೆಳಗೆ
ಕೂರುವೆನು ಹೆಮ್ಮರದ ತಲೆಯನೊರಸಿ,
ಸುತ್ತು ಬಳೆಯಂತಿರುವ ನಿನ್ನ ನೀಲದ ನಿಲಯ
ಇಹುದು ಗೂಡಿನೊಲೆನ್ನನೆದೆಯೊಳಿರಿಸಿ.

---

ಭಾವ : ವಿಶ್ವೆಯ ಭಾವಗೀತ.

ಶಬ್ದಾರ್ಥ : ನೀಲದ=ನೀಲೀ ಬಣ್ಣದ ಆಕಾಶ.

## ೨೪ ಬೆಳಕಿನ ಲಿಂಗ

೧

ಕೂಡು ಬಾ, ಕೂಡು ಬಾ ಲಿಂಗವೇ। ನೀ
ಕೂಡಲು ಒಲ್ಲೇಕೊ ಲಿಂಗವೇ ?
ಕೂಡಲದಲ್ಲೊಗೆವ ಮೂಡಲದೊಲವಿನಲಿ
ಮೂಡಿ ಬಾ, ಮುತ್ತಿನ ಲಿಂಗವೇ !

೨

ಮಾತಾಡೊ ಮಾತಾಡೊ ಲಿಂಗವೇ। ನೀ
ಮಾತಾಡಲೊಲ್ಲೇಕೊ ಲಿಂಗವೇ ?
ಮಾತಿನ ಬಸಿರಲ್ಲಿ ನೆಲೆಗೊಂಡ ಮೌನದಿ
ಹೂತಂಥ ಬೆಳಕಿನ ಲಿಂಗವೇ !

೩

ಗುಡುಗಾಡೊ ಗುಡುಗಾಡೊ ಲಿಂಗವೇ। ನೀ
ಗುಡುಗಾಡಲೊಲ್ಲೇಕೊ ಲಿಂಗವೇ ?
ನಡುಹಗಲ ನೆತ್ತಿಯ ಮೋಡದ ಒಡಲಲ್ಲಿ
ಮಿಡುಕುವ ಮಿಂಚಿನ ಲಿಂಗವೇ !

೪

ಉರಿದೇಳೊ ಉರಿದೇಳೊ ಲಿಂಗವೇ। ನೀ
ಹರಿದೇಳಲೊಲ್ಲೇಕೊ ಲಿಂಗವೇ ?
ಉರದ ಕತ್ತಲೆಯನ್ನು ಹುರಿದು ಕಿಡಿಕಿಡಿಯಾಗಿ
ಮೆರೆವಂಥ ಬೆಂಕಿಯ ಲಿಂಗವೇ !

---

ಭಾವ : ಶ್ರೀ ಗುರುವಿನ ಬ್ರಹ್ಮಸಮಾಧಿಸ್ಥ ತೇಜಃಪುಂಜಕ್ಕೆ ಆಹ್ವಾನ.

ಶಬ್ದಾರ್ಥ : ಉರ=ಎದೆ. ಕೂಡಲ=ಸಂಗಮ, ಒಂದಾಗುವಿಕೆ. ಬೆಳಕಿನ ಲಿಂಗ= ಶ್ರೀ ಅರವಿಂದರು ವರ್ಣಿಸಿರುವ ಸುಪ್ರಮಾನಸ ಪ್ರಕಾಶ.

ವಿಶೇಷ : ಈ ಕವನವನ್ನು "Oh' Linga of Supramental Light" ಎಂದು ಭಾಷಾಂತರಿಸುವ ಯೋಚನೆ ಬೇಂದ್ರೆಯವರಿಗಿತ್ತು ಎಂದು ಅವರ ಟಿಪ್ಪಣಿಯಿಂದ ತಿಳಿಯುತ್ತದೆ.

# ೨೫ ಬೇಕು

೧

ವೈರಿಗೆ ಅನ್ನವು ಸಿಕ್ಕದ ಹಾಗೆ
ಸುಡಬೇಕು, ನೆಲ ಸುಡಬೇಕು ॥

೨

ನವಬೀಜದ ಹೊಸ ಬಿತ್ತಿಗೆಗಾಗಿ
ಬಿಡಬೇಕು, ಹೊಲ ಬಿಡಬೇಕು ॥

೩

ಬಂದ ಬೆಳೆಯು ತುಸು ಕಳೆಯದ ಹಾಗೆ
ಇಡಬೇಕು, ಕಾದಿಡಬೇಕು ॥

೪

ಒಬ್ಬಗೆ ಬಂದುದು ಎಲ್ಲರಿಗುಂಟು
ಕೊಡಬೇಕು, ಹಿಡಿ ಕೊಡಬೇಕು ॥

೫

ಕೊಟ್ಟ ದೇವನಿಗೆ ಕೊಡುವೆನು ಎಂದು
ತೊಡಬೇಕು, ಪಣ ತೊಡಬೇಕು ॥

೬

ಜೀವ ಜೀವಗಳ ಗೆಳೆಯನು ಆಗಿ
ಪಡಬೇಕು, ಸುಖಬಡಬೇಕು ॥

೭

ದೇವದೇವನಿಗೆ ವಾಹನವಾಗಿ
ನೆಡಬೇಕು, ಗುಡಿ ನೆಡಬೇಕು ॥

೮

ಅರವಿಂದರ ಮಕರಂದವ ಕುಡಿದಾ
ನುಡಿ ಬೇಕು. ಒಳನುಡಿ ಬೇಕು ॥

---

ಭಾವ : ಇಲ್ಲಿಯ ವೈರಿ ಅಧೋಮುಖವಾದ ವೈಪರೀತ್ಯದ ವಿಕೃತಭಾವ. ಶ್ರೀ ಅರವಿಂದರ ಒಡನುಡಿ=ಸಹಜೀವನ ಮಂತ್ರವು ವಿಕೃತಭಾವ ಇಲ್ಲದಂತೆ ಮಾಡೀತು ಎಂಬ ಶ್ರದ್ಧೆ.

ಶಬ್ದಾರ್ಥ : ಗುಡಿ=ಧ್ವಜ.

ವಿಶೇಷ : ಹಿಟ್ಲರನ ಸೈನ್ಯಾಧಿಪತ್ಯದಲ್ಲಿ ಜರ್ಮನ್ ಸೈನ್ಯ ರಷ್ಯಾದೇಶದ ಮೇಲೆ ದಾಳಿ ಮಾಡಿದಾಗ, ರಷ್ಯಾ ಜನತೆ ತಮ್ಮ ಹೊಲಗಳಲ್ಲಿಯ ಬೆಳೆದುನಿಂತ ಬೆಳೆಗೆ ಬೆಂಕಿಹಚ್ಚಿ ಗ್ರಾಮಗಳನ್ನು ತೆರವುಮಾಡಿ ಮುಂದಿನ ಗ್ರಾಮಗಳಿಗೆ ಓಡಿಹೋಗುವ ತಂತ್ರವನ್ನು ಬಳಸಿದ್ದರು. ಇದರ ಪರಿಣಾಮವಾಗಿ ಹಿಟ್ಲರ್ ಸೋಲನ್ನಪ್ಪಬೇಕಾಯಿತು.

# ೨೬ ಸಹನಾ

೧
ಸಹನಾ, ಸಹನಾ, ಸಹನಾ, ಸಹನಾ !
ಎಲ್ಲಿರುವೆಯೆ ಸಹನಾ ?
ಜನನದ ಮರಣದ ನಡುವಿನ ಹೊಳೆಯಲಿ
ಈಸಾಡುವ ಮೀನಾ !
೨
ಅನಂತರೂಪದ ಚಿರಂತನಾ !
(ಸನತ್ಕುಮಾರೀ ಚಿರಯೌವನಾ !)
ತೆರೆ ತೆರೆ ನಿನ್ನಾ ಅನಿಮಿಷನಯನಾ
೩
ನೆಲಕೆ ಮೊಲೆಯ ಕುಡಿಸಿದ ತರಳೇ !
ಸಾವಿರ ದೀಧಿತಿ ಸೂಸುವ ಹರಳೇ !
ಸಹನಾ, ಸಹನಾ, ಸಹನಾ !
೪
ನೀನಿಲ್ಲದ ಸುರವೀರನು ಭೀರು
ನೀ ಪ್ರಾಣದ ಬೇರು.
ನಿನ್ನೆದೆಹಾಲನು ಊಡಿಸೆ ಸಹನಾ
(ಹಾಲಿರದಿರೆ ನಾನೆಂಬುವದೆ ಅಸಹನಾ)
ನೀನೇ ಸಹ-ಜೀವದ ಭವನಾ !

---

ಭಾವ : ಸಹಜೀವನಕ್ಕೆ ದಿವ್ಯ ಸಹನೆ ಬೇಕು.

ಶಬ್ದಾರ್ಥ : ಸಹನಾ=ತಾಳ್ಮೆ, ಕ್ಷಮೆ. ದೀಧಿತಿ=ಪ್ರಕಾಶಕಿರಣ, ಕಾಂತಿ. ಊಡಿಸು=ಉಣಿಸು.

## ೨೭ ಪ್ರಕೃತಿ-ಪುರುಷ

೧

ಪ್ರಕೃತಿಗೆ ಕೈಕಾಲುಂಟು
ಪುರುಷನಿಗೋ ಅವೆ ಇಲ್ಲ.
ಪ್ರಕೃತಿಗೆ ಕಣ್‌ಕಿವಿ ಇಲ್ಲ.
ಪುರುಷನಿಗೋ ಇವೆ ಎಲ್ಲ.

೨

ಈ ಇಬ್ಬರ ಸಂಸಾರ
ನಡೆದಿಹುದು ನಿರಂತರ.
ಬೆಳೆಯುತಿಹುದು ಸಂತತಿ
ಏಕೆ ಅದಕೆ ಇತಿಮಿತಿ!

೩

ಹೊಟ್ಟೆಮಕ್ಕಳನ್ನೆ ತಿಂದು
ಬಾಳುತಿಹರು ಇಬ್ಬರೂ.
ಅಮರರವರು ಹೀಗೆ ಇಹರು,
ಸಾಯಲಾರರೊಬ್ಬರೂ.

೪

ಇಂಥ ಈ ಪ್ರಜಾಪತಿ
ಆ ಪ್ರಾಣೇಶ್ವರಿಗೆ ಗತಿ.
ಸಂತಾನಕೆ ಸಾವೆ ಶರಣ
ನಿತ್ಯ ಜನ್ಮ, ನಿತ್ಯ ಮರಣ.

೫

ಅದರ ಮಧ್ಯೆ ಕನಸಿನಂತೆ
ಜೀವನದೀ ಚಿತ್ರಪಟ
ತೆರೆಮರೆಗಳ ಆಟದಲ್ಲಿ
ಉರುಳುತಿಹುದು ಝಟಪಟ.

೬

ತಿರುಗ ಮುರುಗ ಮತ್ತೆ ಅದೇ
ಇದ್ದಕಿದ್ದ ಹಾಗೆ ಇದೆ.
ಸಾಕೊ ಕಥೆ, ಸಾಕು ಹಾಡು.

೭
ಏಕೆ ವ್ಯಥೆ ಪಡುವೆ ಪಾಡು?
'ಇದುವು ವ್ಯರ್ಥವಲ್ಲವೆ?'
'ಅರ್ಥ ಇದ್ದರಲ್ಲವೇ?'

---

ಭಾವ : ಹೆಳವ ಗಂಡ ಮತ್ತು ಕುರುಡಿ ಹೆಂಡತಿ ಇವರ ಭಿಕ್ಷುಕ ಸಂಸಾರದ ಆರೋಪವನ್ನು ಪ್ರಪಂಚದ ವಿಕೃತ ಜೀವಿತದ ಮೇಲೆ ಮಾಡುವದುಂಟು. ಅದನ್ನು ವಿಡಂಬಿಸಿದ ನುಡಿ.



## ೨೮ ರೌದ್ರಿ

೧
ಚಿಕ್ಕೆ ಬಾನೊಳಿಂಗಿವೆ
ಮೋಡ ಮುಗಿಲ ನುಂಗಿವೆ.
ಚಿರಗುಟ್ಟುವ ದುರಗುಟ್ಟುವ
ಕತ್ತಲೋ ಕತ್ತಲೇ
ಸುಟ್ಟುರೆಯೇ ಬಿರುಗಾಳಿಯೆ
ಲೋಕದತ್ತಲಿತ್ತಲೆ.
ಮುರಿದು ಸೆರೆ, ಬಂತೊ ನೆರೆ
ಮರುಳ ಪಡೆಯೆ ಬೆತ್ತಲೆ.
೨
ಮರ ಕಿತ್ತಿವೆ ಬುಡ-ತಳ
ಹಾದಿ ಉಡುಗೆ ಝಳಝಳ
ಕಡಲು ಕುಣಿಯೆ ಗೊಂದಣ
ತೆರೆ-ಮುರಿ-ನೊರೆ ಧಂಧಣ
ಮಬ್ಬೆ ಮಳೆಯು ನಾಡಿಗೆ
ಮುಗಿಲಿನಂಚು, ಕಾಡಿಗೆ.
ಸಾವು ಹೊಂಚು, ಅಯ್ಯೊ ಮಿಂಚು
ಕಣ್ತೆರೆದೆಡೆ ಸುತ್ತಿಗೊಂಡ
ಲಕ್ಷಕೋಟಿ ರೂಪಗೊಂಡ-
ಸಾವಿನಿಂದ ಮುತ್ತುತ
ಕಷ್ಟನಷ್ಟ ಬಿತ್ತುತ
ಓಗ್ಗುಗೊಂಡು ಹುಚ್ಚೆದ್ದು
ಕುಣಿವ ತಾಯಿ ಬಾ!

೩
'ರೌದ್ರಿ' ನಿನ್ನ ಹೆಸರು
ಮೃತ್ಯು ನಿನ್ನ ಉಸಿರು
ನಿನ್ನ ಒಂದು ನಡೆ ಅಡಿ
ಜಗವ ಮಾಡೆ ಪುಡಿಪುಡಿ.
ಪ್ರಳಯಂಕರಿ ಓ ಕಾಳೀ
ಬಾ ತಾಯಿಯೆ ಬಾ !

---

ಭಾವ : ಶ್ರೀ ವಿವೇಕಾನಂದರು ಮಹಾಕಾಲಿಯನ್ನು ಆಹ್ವಾನಿಸಿದ ಭಾವಗೀತ, ಇಲ್ಲಿ ಕನ್ನಡಿಸಲಾಗಿದೆ.

ಶಬ್ದಾರ್ಥ : ಸುಟ್ಟುರೆ=ಸುಂಟರಗಾಳಿ; ಗೊಂದಣ-ಗೊಂದಳೆ=ಗದ್ದಲ. ದುರುಗುಟ್ಟು=ಸಿಟ್ಟಿನಿಂದ ಕಣ್ಣಿಸಿದು ನೋಡು, ಕೆಕ್ಕರಿಸು. ಮರುಳ=ಮೋಹ. ಬೆತ್ತಲೆ=ಬತ್ತಲೆ, ನಗ್ನ, ಶೂನ್ಯ.

ವಿಶೇಷ : ವಿವೇಕಾನಂದ ಕವಿತಾಂಜಲಿ, ಸಂ. ಸ್ವಾಮಿ ಪ್ರಬುದ್ಧಾನಂದ, ವಿವೇಕಾನಂದ ಶತಮಾನೋತ್ಸವ ಸಮಿತಿ, ಶ್ರೀ ರಾಮಕೃಷ್ಣಾಶ್ರಮ, ಬೆಂಗಳೂರು - ೧೯೬೪. ಇದರಲ್ಲಿ ಸೇರ್ಪಡೆಯಾದ ಕವನ.



## ೨೯ ಅದ ಬರಿದೆ ನುಡಿಸಬಹುದೆ ?

೧

ಕಣ್ ಹಿಡಿದುದನ್ನು ಮೈ ಹಿಡಿಸಬಹುದೆ ?
ಅದ ಬರಿದೆ ನುಡಿಸಬಹುದೆ ?
ಕುಣಿದಿಲ್ಲ ಕೊರಳು, ಮಣಿದಿಲ್ಲ ಬೆರಳು,
ಮರವೀಣೆ ಮಿಡಿಸಲಹುದೇ ?

೨

ಹುಲುಗೊಡ್ಡು ಮೋಡ ಹುಸಿಗುಡುಗಿದಾಗ
ಕೆಲಜೀವ ಭೇಕಿಸುವವು
ಮೈನವಿರ ನವಿಲು ಮೈಯುಣ್ಣದೇನೆ
ಬರಿದೆಂತು ಕೇಕಿಸುವವು ?

೩

ವೇದಕ್ಕೆ ಹಿರಿದು ವಚನಕ್ಕೆ ಕಿರಿದು
ನುಡಿಕಟ್ಟಿ ಒಟ್ಟಬಹುದು
ಆ ಇರವನಿರದೆ ಅರಿವಾಗದೇಯೆ
ಶ್ರುತಿಯೆಂತು ಹುಟ್ಟಲಹುದು !

೪

ಶ್ರೀಗೀತೆಗಿಂತ ಮಿಗಿಲಾದ ರಾಗ
ಸ್ವರವೆತ್ತಿ ಹೇಳಬಹುದು
ಭಗವಂತಗಿಂತ ಎತ್ತರಕೆ ಎಂತು
ಕಿರಿಜೀವ ಬಾಳಬಹುದು ?

೫

ಬಾಳಸೆಲೆಯ ನುಡಿಬೇಕು, ಬಣ್ಣ-
ದೊಳಬಾಳ ಆಳಬೇಕು,
ಅರುಹಾಗಬೇಕು, ಹರುಹಾಗಬೇಕು,
ಬಳಿತುದಿಗೆ ಏಳಬೇಕು.

---

ಭಾವ : ಶೈಲಿಯ ಉತ್ಕಟತೆಯಿಂದ ಶೀಲ ಕಟ್ಟುವುದಕ್ಕಿಂತ ಶೀಲದ ಸ್ವಯಂಭಾವದಿಂದ ಶೈಲಿಯ ಶೈಲ ಶಿಖರವನ್ನೇರಬೇಕು. ಒಂದು ಕೃತಕ; ಇನ್ನೊಂದು ಕಲಾತ್ಮಕ ಸಂಸ್ಕೃತಿ. ಇಲ್ಲಿ ಶೀಲ=Character ಮತ್ತು ಶೈಲಿ=Stylish ಎಂಬ ಸೂಚನೆ ಇದೆ.

ಶಬ್ದಾರ್ಥ : ಹುಲುಗೊಡ್ಡು=ಅಲ್ಪ ವ್ಯರ್ಥ. ಭೇಕಿಸು=ಕಪ್ಪೆಯ ಧ್ವನಿ. ಕೇಕೆ=ನವಿಲಿನ ಸಂತೋಷದ ಕೂಗು.

# ೩೦ ಭೂಮಿಯು ಅನಂತ ಸೌಂದರ್ಯಶಾಲಿನಿ

೧

ಭೂಮಿಯು ಅನಂತಸೌಂದರ್ಯಶಾಲಿನಿ,
ಎಲ್ಲವನ್ನೂ ನೋಡುವೆನೆಂದರೆ ನನ್ನಳವೆ ?
ಕಾಲವು ಕ್ಷಣಕ್ಷಣಕ್ಕೂ ಸಾಯುತ್ತಿದೆ ;
ಅದನ್ನು ನಾನು ತಡೆದು ನಿಲ್ಲಿಸಬಲ್ಲೆನೇ ?
ಆಗಬೇಕಾದ ಕಾರ್ಯ ಅನಂತವಾಗಿವೆ ;
ನಾನೊಬ್ಬನೇ ಅಲ್ಲ, ನನ್ನ ಜೀವಮಾನದೊಳಗಾಗಿಯೆ
ಎಲ್ಲವೂ ಆಗಬೇಕಾಗಿಲ್ಲ.

೨

ಜೀವಜಗತ್ತುಗಳನ್ನು ತುಂಬಿತುಳುಕಿ ಸೂಸುವ
ಒಂದು ಶಕ್ತಿ
ನಾನೆಂದು ಕಾಣುವ ಈ ಪಾತ್ರವನ್ನು
ತನ್ನ ಮಹಾನಾಟಕಕ್ಕಾಗಿ ಸಜ್ಜುಗೊಳಿಸಿದೆ.

೩

ಈ ಪಾತ್ರದಿಂದ ಆಗತಕ್ಕಷ್ಟೇ ಕೆಲಸವಾದೀತು ;
ಎಲ್ಲ ಕೆಲಸಕ್ಕೂ ನನ್ನನ್ನೇ ಎಳದಾಡುವದು ಸೂಕ್ತವಲ್ಲ.
ನೋಡತಕ್ಕಷ್ಟೇ ನೋಡೇನು, ಮಾಡತಕ್ಕಷ್ಟೇ ಮಾಡೇನು.
ಅಹಂಕಾರದ ಹೆಚ್ಚುಗಾರಿಕೆ ರಸಕ್ಕೆ ಅನುಚಿತ ;
ವಸ್ತುವಿಗೆ ಅಧಿಕಪ್ರಸಂಗ.
ಪ್ರೇಕ್ಷಕರ ಚಪ್ಪಾಳೆಗಾಗಿ ಪಾತ್ರದಿಂದ ಅಪಾತ್ರ-ಕಾರ್ಯ
ಮಾಡಿಸುವದು ವಿನೋದವಲ್ಲ.
ಅಪಹಾಸ ಉಪಹಾಸವು ಪಾತ್ರವನ್ನೂ ಪ್ರೇಕ್ಷಕರನ್ನೂ
ಇಬ್ಬರನ್ನೂ ಹಾದಿಗೆಡಿಸುವದು.

೪

ಕಾವ್ಯದಂತೆ ಕವಿಯ ಆತ್ಮವೂ ರಸ,
ಪ್ರೇಕ್ಷಕರ ಆತ್ಮವೂ ರಸವೇ.
ಆ ರಸದ ಮಾರ್ಗದಿಂದ ನಾವು
ಸೂತ್ರಧಾರ ಶಕ್ತಿಗೆ ಆಧೀನರಾಗುವಾ.

೫

ಈ ಪರಾ-ಅಧೀನತೆಯಲ್ಲಿ ಸ್ವಾತಂತ್ರ್ಯವಿದೆ.
ನನ್ನ ಚಿತ್ತಪುರುಷನು ಪರಾಶಕ್ತಿಗೆ ಭಕ್ತನಾಗಿರುವ;
ಪುರುಷೋತ್ತಮನ ಪಾದರೇಣುವಾದರೂ ಆಗಿರುವ.

೬

ಅರಿವಿನ ಆನಂದ ಪಡೆಯಲು
ಆ ಆನಂದದಲ್ಲಿ ನಡೆಯಲು-ಈ ಜೀವ
ನಿರಂತರವಾಗಿ ಉನ್ಮುಖವಾಗಿದೆ; ಸರ್ವತೋಮುಖವಾಗಿದೆ.
ನಿನ್ನ ಬೆಳಕಿನಲ್ಲಿ ನನ್ನನು ಬುದುಕಿಸು ತಾಯಿ,
ಓ ಮಹಾಮಾತೆ, ಅದಿತಿ-ಶಕ್ತಿ !

೭

ಈ ಮಣ್ಣಿನ ಒಡಲಲ್ಲಿ
ಈ ಗಾಳಿಯ ಎಳೆಯಲ್ಲಿ
ಈ ಮಿಂಚಿನ ಸುಳಿಯಲ್ಲಿ
ನಿನ್ನ ಮಗುವೊಂದು ತನ್ನ ಜೀವವನ್ನೆ ಕಣ್ಣಾಗಿ ಮಾಡಿ
ನಿನ್ನನ್ನೇ ನೋಡುತ್ತಿದೆ, ನಿನ್ನನ್ನೇ ಬೇಡುತ್ತಿದೆ.
ಈ ವಿಕಲ ಪ್ರಾಣಿಯನ್ನು
ಸಕಲ ಜೀವನಕ್ಕಾಗಿ ಸಿದ್ಧ ಮಾಡು ಎಂದು.

('ಪ್ರಾರ್ಥನೆ' ಎಂಬ ಶೀರ್ಷಿಕೆ ಇತ್ತು)

---

ಭಾವ : ಬೇಂದ್ರೆಯವರ ಜೀವನದೃಷ್ಟಿ ಅಭಿವ್ಯಕ್ತಗೊಂಡ ಕವನ.

ಶಬ್ದಾರ್ಥ : ಅಪಹಾಸ=ತಿರಸ್ಕಾರದ ಹಾಸ್ಯ. ಉಪಹಾಸ=ನಗೆಗೆ ಗುರಿಯಾದ ಹಾಸ್ಯ. ವಿಕಲ=ಕಳವಳಗೊಂಡ, ಗಾಬರಿಯಾದ.

# ೩೧ ಇದೆ ಇಲ್ಲಿಯೆ

೧
ಇದೆ ಇಲ್ಲಿಯೆ ಎದೆಯಲ್ಲಿಯೆ
ಎಂದರು ಎಲ್ಲೊ ಇದೆ.
ಹೃದಯವು ನಿರ್ದಯವದು
ಆದೀತೇನು ? ಸುಧೆ ?
ಹುಳಿ ಹಿಡಿದರೆ ಉಳಿದಾವೇ
ಉಳಿದೊಡವೆಗಳೆಲ್ಲಾ ?
೨
ಇಲ್ಲಾ ಇಲ್ಲಾ ಎನಲೇ
ಈ ಕರೆಯೇನಿಲ್ಲಾ ?
ಪ್ರಳಯವು ನೀನಿರದಿರೆ ; ನೀ-
ನಿದ್ದುದು ಪ್ರಣಯವಿಧೀ
ಸುಹೃದನೆ ಬಾ ಉದಯಿಸು ನೀ
ನೀನೇ ಹೃದಯನಿಧೀ.
೩
ಸವಿನುಡಿಗಳ ಒಡನಾಟವೆ
ನಿನ್ನೊಡನಾಟದೊಲು
ನಿನ್ನೊಡನಾಡುತಲಿದೆ ನ-
ನ್ನೆದೆಯೇ ಪಾಟದೊಲು.

---

ಭಾವ : ಎದೆಯ ಡವಡವಿಕೆಯಲ್ಲಿಇದೆ. ಇದೆ ಎಂಬ ಧ್ವನಿ ಸ್ಫುರಿಸಿದಾಗ ಬಂದ ಲಹರಿ.

ಶಬ್ದಾರ್ಥ : ಪಾಟ=ಹರವು, ವಿಸ್ತಾರ.

# ೩೨ ಎಲ್ಲ ಆಟ-ಮಾಟ-ನಗೆ !

೧
ನೆಲವನ್ನು ತಿರುಗುವೊಲು
ತಿರುಗುವುದು ನಿಂತವೊಲು
ಮಾಡಿರುವ ನಿನಗೆ
ಯಾವುದಿದೆ ಬಿಗಿ ? ಎಲ್ಲ
ಆಟ, ಮಾಟ, ನಗೆ.
೨
ಬಾನಿಗಾವುದು ಕಂಬ ?
ಇಳೆಗಾವುದಾಲಂಬ ?
ಗಾಳಿ ಸ್ವಚ್ಛಂದ.
ನೀರೇರಿ ಮಳೆಯಾಗೆ
ಬೆಳಕಿಳಿದು ಬೆಳೆಯಾಗೆ
ಚಂದ ಬಿಸವಂದ.
೩
ಯಾರು ಯಾರೊಳಗಿಹರೊ ?
ಯಾರೊಳಗ ಬೆಳಗಿಹರೊ ?
ಜೀವ ಜೇನೋ !
ದೇವ, ಜಗದೀ ಹೂವ
ತೆರೆದು ಮುಚ್ಚುವನಾವ ?
ನಾನೊ ನೀನೋ ?

---

ಭಾವ : ದೇವರ ಸೂತ್ರಧಾರಿತ್ವ ಜೀವದ ಪ್ರೇಕ್ಷಕಭಾವ ಮೇಳಗೊಡದಿದ್ದರೆ ಜಗನ್ನಾಟಕದಲ್ಲಿ ರಸವಿಲ್ಲ.

ಶಬ್ದಾರ್ಥ : ಬಿಸವಂದ-ಬಿಸದಳ=ಆಶ್ಚರ್ಯ, ವಿಸ್ಮಯ.

# ೩೩ ಯಾರು ?

೧
ಯಾರು ತಳಕೆ ನೆಲದ ಹಾಗೆ
ಸುತ್ತುತಿಹರು ಸುಮ್ಮನೆ ?
ಕಾಲಕೆಳಗೆ ತುಳಿದು ಅದನು
ನಾನು ಇಹೆನು ಬಿಮ್ಮನೇ.

೨
ಬೆಂಕಿ ನುಂಗಿ ಬೆಳಕ ಸೂಸಿ
ಕತ್ತಲಲ್ಲಿ ಯಾರಿದು ?
ಅಳಿದು ಬೆಳೆದು ಬೆಳಗುತಿಹುದು
ಇದರ ನೆಲೆಯೆ ತೋರದು.

೩
ಕೋಟಿ ಚುಕ್ಕಿ ಬರುವವಣ್ಣ
ಇರುಳ ವ್ಯೆಯ ನೆಕ್ಕುತ
ಹಗಲಚುಕ್ಕಿಗೀಡೆ ಅದುವು
ಬಹದು ಕಣ್ಣ ಕುಕ್ಕುತ.

೪
ನಸುಕು ಬೈಗು ಬೆಳಕು ಮಬ್ಬು
ಕಲೆತು ಬೆರೆತು ಆಡುತ
ಎತ್ತೊ ಹೊತ್ತಿನತ್ತ ಸುಗ್ಗ-
ತಿಹವು ಯುಗವ ದೂಡುತ.

೫
ಚಿರಂತನದ ಪಥಿಕ ನಾನು
ಹೊರಟೆ ತಿರುಳ ಹುಡುಕುತ,
ನೆರಳಿನಂತೆ ಹುರುಳಿನಲ್ಲಿ
ಕರಗಿದರೂ ದುಡುಕುತ.

---

ಭಾವ : ಪೃಥ್ವಿಯಲ್ಲಿ ಗರ್ಭಿತವಾದ ವಾಸುದೇವ ಭಾವ ತನ್ನ ಸಂಚಾರ ಯಾತ್ರೆಯಲ್ಲಿಯೂ ಕಳೆದುಕೊಳ್ಳದ ಒಂದು ಅವಿಭಕ್ತಿಯನ್ನು ತೋರಿಸುತ್ತದೆ. ಅದರ ಮಿಂಚು ಜೀವನದಲ್ಲಿಯೂ ಸಾಹಿತ್ಯದಲ್ಲಿಯೂ ಪ್ರತಿಬಿಂಬಿಸುವುದುಂಟು.

ಶಬ್ದಾರ್ಥ : ಬಿಮ್ಮನೆ=ಗಂಭೀರವಾಗಿ. ಬೈಗು=ಸಾಯಂಕಾಲದ ವೇಳೆ.

## ೩೪ ನೆಲವೆಲ್ಲಾ ನೀರಾಗಿರೆ

೧

ನೆಲವೆಲ್ಲಾ ನೀರಾಗಿರೆ
ಸೃಷ್ಟಿಯು ಎತ್ತೋ ಸಾಗಿರೆ
ಒಡೆದವು ಆನಂದದ ರೆಕ್ಕೆ
ಬಾನಗಲದ ಕಡಲಾಳದ
ಒಂದೇ ಮೀನಕ್ಕೆ.

೨

ಎಲ್ಲೆಲ್ಲೂ ಅಲ್ಲೋಲದ
ಕಲ್ಲೋಲದ ಮಾಲೆ
ಮಿಂಚಿನ ನೀರೆಯ ಪಾಂಗಿದೆ
ನೀರ್ಕಂಚಿದ ಮೇಲೆ
ಬಯಲಗಲದ ಬಾನ್ಗನ್ನಡಿ ಕನ್ನಡಿಸಿದ ಹಾಗೆ,

---

ಭಾವ : ಪ್ರಳಯದ ಅದ್ವೈತದಲ್ಲಿ ಸೃಷ್ಟಿಯ ದ್ವೈತ ಮೂಡಿಕೊಂಡೇ ಇರುವುದಾಗಿ ಕಾಣುವದು.

ಶಬ್ದಾರ್ಥ : ನೀರೆ=ಸುಂದರಿ, ನಲ್ಲೆ ಪ್ರಿಯತಮೆ. ಪಾಂಗು=ರೀತಿ, ಸಾದೃಶ್ಯ.



# ೩೫ ಬಂದ ಸ್ವಸ್ಥತೆ ನಿಲಲಿ

೧

ಬಂದ ಸ್ವಸ್ಥತೆ ನಿಲಲಿ ಮಲೆಯೊಲು, ನೆಲವು ನೆಲೆ ಬಿಡದಂತೆ.
ಹಾರು-ಸ್ಥಿರತೆಯು ಗೂಡ ಕಟ್ಟಲಿ ಇಲ್ಲೆ ತಳ ಹಿಡಿದಂತೆ.

೨

ತಮ್ಮ ಒಲುಮೆಯ ತೆರೆದ ಸ್ವೈರಣೆ ಹರಕೆಯೊಲು ನೆರಳಾಗಿ
ತಮ್ಮ ಬೆಳಕನು ಈಂಟ ಕಟ್ಟಲಿ ಜೀವವೇ ಹರಳಾಗಿ.

೩

ನಸುಕು ತೆರೆದರೆ ನೇಸರಗೆ ತಡವೇನು ? ಅವ ಬಂದಂತೆ.
ತಮ್ಮ ನುಡಿ ಗುಡಿಗಟ್ಟದರೆ ಸರಿ ಜಗವೆ ನೀನಂದಂತೆ.

---

ಭಾವ : ಸ್ವ-ಸ್ಥತೆಗಾಗಿ ಮಾಡಿದ ಪ್ರಾರ್ಥನೆ.

ಶಬ್ದಾರ್ಥ : ಮಲೆ=ಬೆಟ್ಟ ಈಂಟ=ಕುಡಿದು.



# ೩೬ ಅತರಿಸು ಬಾ

೧
ಅವತರಿಸು ಬಾ ನಾರಾಯಣಾ
ಎತ್ತೆನ್ನ ಮೇಲಕೆ ಚಿದ್ಘನಾ
ಈ ಜೀವವಾಗಲಿ ಪಾವನಾ
೨
ಈ ಪ್ರಾಣ ತನು ಮನ ದೇವನಾ
ಹಗಲಿರುಳು ಮಾಡಲಿ ಸೇವನಾ
ಆಗಹುದು ಭಗವಜ್ಜೀವನಾ
೩
ಅತ್ಯಂತ ನಿರ್ಮಲ ಪ್ರೇಮವು
ಅದು ಸಹಜ ಜೀವನ ಧಾಮವು
ಅಲ್ಲಿರುವ ಅನ್ನವೆ ಸೋಮವು

---

ಭಾವ : ಜೀವದ ಸೋಮಮಂಡಲವೇ ದೇವಾವತಾರದ ನರ್ತನರಂಗ. ಅದಕ್ಕೆ ನಮ್ಮ ಬದುಕು, ಬಾಳುಗಳ ಭೂಮಿಕೆ ಸಿದ್ಧವಾಗುವದು ಅವಶ್ಯ. ಅದಕ್ಕಾಗಿ ಸಲ್ಲಿಸಿದ ಪ್ರಾರ್ಥನೆ.

ಶಬ್ದಾರ್ಥ : ಧಾಮ=ಮನೆ. ಸೋಮ=ಅಮೃತ.



# ೩೭ ಕಂಡುದನೆ ಒಳಗೊಂಡು

೧
ಕಂಡುದನೆ ಒಳಗೊಂಡು ಉಂಡು ಗರ್ಭೀಕರಿಸಿ
ಹೊರಬರುವ ಮೈಗೊಂಡ ಪಿಂಡ ಬೆಳೆವಂತೆ
ಆಕಾಶಗಂಗಾತಟಾಕ ತೇಜಃಪುಂಜ-
ದಲ್ಲಿ ಒಳಗಿನ ಬೆದೆಗೆ ಚುಕ್ಕಿ ಹೊಳೆವಂತೆ.

೨
ಕಾವಾಗಿ ಬೆಳಕಾಗಿ ಮಿಂಚಾಗಿ ಸೆಳಮೆಯಲಿ
ತಾನು ವಿಶ್ವಂಕರ್ಷ ಪವನವಾಗಿ
ಬಾನೆ ಮೈ, ನವಿರೆ ನಕ್ಷತ್ರದಂತಿರೆ, ಎಂದು
ಉಸಿರು ಮೈದುಂಬುವದೊ ಕವನವಾಗಿ ?

೩
ಗುರುವೆ, ನಿನ್ನಲ್ಲಿರುವ ಅರುವೆ ತಿಳಿಹಾಲಾಗೆ
ತರುವೆ 'ಕರುವೇ ಬಾರ ತೊರೆವೆ' ಎಂದು,
ಕರೆವಂದು ಸವಿಯ ತವನಿಧಿಯಾಗಿ ಕರಿಗೊಂಡು
ಈ ಇರುವೆ ತುಂಬುವದು ದಿನ ತುಂಬುವಂದು.

---

ಭಾವ : ಅದ್ಭುತ ದರ್ಶನವು ಮೈವುಂಡು ವರ್ಣಸಾವೈಖರಿಯಾಗಿ ಇಳಿಯಬೇಕಾದರೆ, ಆ ಧಾರಣೆಗೂ ದಿನ ತುಂಬಬೇಕಾಗುತ್ತದೆ.

ಶಬ್ದಾರ್ಥ : ಬೆದೆ=ಹದ, ಪಕ್ವತೆ. ಸೆಳಮೆ=ಸೆಳೆಯುವಿಕೆ, ಎಳೆತ. ವಿಶ್ವಂಕರ್ಷಪವನ=ವಿಶ್ವವನ್ನು ಆಕರ್ಷಿಸುವ ಗಾಳಿ, ವಿಶ್ವವನ್ನು ಒರೆಗಲ್ಲಿಗೆ ಹಚ್ಚುವ ಗಾಳಿ.



# ೩೮ ಇಂದ್ರಜಾಲ

೧

ಎವೆಯನಿಕ್ಕಿ ಕಣ್ಣಿಂದ ಕಂಡೆ ನಾ ರವಿಯ ತೇಜದಾಟ
ಬಣ್ಣ ಬಣ್ಣದಾಕೃತಿಗಳಲ್ಲಿ ಕುಣಿಕುಣಿವ ಮೋಡಿ ಮಾಟ.
ಏಳು ಬಣ್ಣ ಉರುಳುರುಳಿ ಉರುಳಿಯಾದಂತೆ ತಿರುಗುತಿಹವು
ಇಂದ್ರಚಾಪವನೆ ತಂತಿಮಾಡಿ ಹೆಣೆದಂತೆ ಮರಳಿ ಬಹವು

೨

ಎಂಥ ಮಂಜು, ಇದು ಏನು ಹೊಗೆಯು, ಅಹ ಯಾವ ಮೋಡದೊಡ್ಡು
ಬಗೆಯ ಹಗೆಯವನೆ ಹೊಕ್ಕ ಹಾಗೆ ಹರಹುವದು ಮಬ್ಬು ಗೊಡ್ಡು.
ಅದರ ಹೊಂಚಿನಲಿ ಮಿಂಚು ಒಂದು ಚಂಚಲಿಸಿ ಅಡಗಲುಂಟು
ಬೆಳಕು ಕತ್ತಲೆಗೆ ಯಾವ ಗಂಟೊ? ಬಂಜೆಯಲಿ ಬೆಸಲ ನಂಟು.

೩

ರಂಗವಲ್ಲಿಯೊಳಗಿಟ್ಟ ಅಕ್ಕಿಗಳು ಬಿಚ್ಚಿ ಕುಣಿವ ಹಾಗೆ
ಅತ್ತ ಸರಿಯುವವು ಇತ್ತ ಹರಿಯುವವು ಎತ್ತೊ ಕೆಳಗೆ ಮೇಗೆ
ತಪ್ತ ಕಾಂಚನದ ತಗಡಿನಲ್ಲಿ ಬರೆದಂಥ ಜಂತ್ರದಂತೆ
ಯಾವ ಲಿಪಿಯೊ ಇದು, ಏಕೆ ಬಂತೊ ಇಲ್ಲಾವ ತಂತ್ರದಂತೆ ?

೪

ಬಿಳಿಯ ಮೋಡಗಳು ಒಟ್ಟುತಿಹವು ಹಿಮಶೈಲ ಕಟ್ಟಿದಂತೆ ?
ಕರಿಯ ಮೋಡ ಮಿರಿ ಮಿಂಚುತಿಹವು ನವನೀಲ ಹುಟ್ಟಿದಂತೆ.
ಇಲ್ಲಿ ಬಣ್ಣಗಳ ನುಂಗುವಂಥ ಬಿಳಿ ಬೆಳಕು ಬಂತು ಒಂದು
ನೆನಸಿದಂಥ ರೂಪವನು ತೋರುವದು ಕ್ಷಣವೆ ಕಟ್ಟಿ ತಂದು.

೫

ಅದೊ ಕರ್ಣದಲ್ಲಿ, ಒಳುವರ್ಣದಲ್ಲಿ ಸ್ವರವರ್ಣವಲ್ಲಿ ಅರಳಿ
ರಸರಾಗದಲ್ಲಿ ಅನುರಾಗವಲ್ಲಿ ಹೊಸ ಒಲವು ಲಹರಿ ಮರಳಿ.
ಕರೆಯುತಿಹುದು ಬಗೆಬಗೆಯ ನಗೆಯು ಒಗುಮಿಗುವ ನಾಕದಲ್ಲಿ.
ಗಿಣಿಗಿಣಿಲು ಗಂಟೆ ಮಧುರಸವನೀಂಟಿ ಗಂಧರ್ವಲೋಕದಲ್ಲಿ–

೬
ಮೂರ್ತಿಗೊಂಡ ರೂಪಕವು ಕಾಣದಿದೆ, ಊನ ನ್ಯೂನವೇನೋ!
ತರಳ ಉಪಮೆ ಲವಲವಿಕೆಯಲ್ಲಿ ಉತ್ಪ್ರೇಕ್ಷೆಯಾಯಿತೇನೊ!
ತೇಜವೊಡೆದು ಪರಪುಷ್ಪವಾದ ಗ್ರಹಮಾಲೆಯಾದ ಹಾಗೆ-
ಉತ್ಪ್ರೇಕ್ಷೆಯಂತೆ ಕ್ಷಣಕೊಂದರಂತೆ ತೋರುವದದೇಕೊ ನನಗೆ?

ರಚನೆ : ೧೯೪೨

---

ಭಾವ : ಚಿತ್-ಪ್ರಕಾಶದ ವೈಚಿತ್ರ್ಯದ ವಲ್ಲರಿಯ ಹಾಸು-ಬೀಸನ್ನು ಕಂಡಾಗ, ಇಂದ್ರಜಾಲ ಒಳಗೂ ಹಬ್ಬಿದೆ ಎಂದು ತೋರುವದು. ಅದನ್ನು ದಾಟುವದು ಅಷ್ಟು ಸುಲಭವಲ್ಲ.

ಶಬ್ದಾರ್ಥ : ಬೆಸಲ-ಬೆಸಲ್=ಹೆರಿಗೆ. ಜಂತ್ರ=ಯಂತ್ರ, ವಾದ್ಯ.



# ೩೯ ಅಣುವಿನೊಡಲೊಳಗೆ

೧

ಅಣುವಿನೊಡಲೊಳಗೆ ಆಯೆಂದು ಬಾಯ್ದೆರೆದಿರುವ
ಮಹತೋ ಮಹೀಯವೇ! ನಿನ್ನ ಬರವಿನ ಮುಂಚೆ
ಬರುವ ನೆಳಲೋ ಏನೊ, ಇದುವೆ ಕಾಡಿಗೆ ಕರೆವ
ಕಾರ್ಗಾಲ! ಈ ಬೆಳಕು ಸುಡುವ ಸಿಡಿಲೇ ಮಿಂಚೆ?
ಯೌವನದ ನಂದನದ ಸುಕುಮಾರ ಸುಮಗಳನು
ಬಾಳ ಬೇಳುವೆಯು ಬೇಡುವದೆ? ಇದಕೀ ಹವಿಯೊ
ಆಹಾ! ಭವಿಯೊ? ಜಂಗಮಕ್ಕೆ ನೀಡವುಗಳನು
ನಿನ್ನ ದೀಪಾರತಿಯೊ! ರವಿಯೊ? ಕತ್ತಲೆ ಗವಿಯೊ?

೨

ಇಂದ್ರಚಾಪದಿ ಬರೆದ ರಂಗವಳ್ಳಿಯ ತುಳಿದು
ಬರುವ ಪದಪಲ್ಲವದಿ ಹರಿವ ವಿಷ್ವಕ್ ಸೇವ್ಯ
ಜೀವನಜ್ಯೋತಿಯೇ! ನಿನ್ನ ಸತ್ತ್ವವೆ ತಳೆದು
ಮೂರ್ತಿಗೊಳ್ಳುತಲಿಲ್ಲಿ ನವಿರುನವಿರಿಗೆ ಕಣ್ಣ
ತೆರೆದು ನೋಡುತ್ತಿರುವ ನವ್ಯವೇ ದಿವ್ಯವೇ!
ಸಾವಿರದ ನಿನ್ನ ಮೊಗದಲ್ಲಿ ಸಾವಿರ ಬಣ್ಣ.

---

ಭಾವ : ಅಣುವಿನ ಸಂಹಾರಶಕ್ತಿಯಲ್ಲಿ ಸೃಷ್ಟಿಯ ಲೀಲಾವಿಹಾರದ ರೂಪರೇಖೆಗಳು ಮಿಂಚುವುದುಂಟು.

ಶಬ್ದಾರ್ಥ : ಮಹತೋ=ವಿಸ್ತಾರವಾದ. ಮಹಿ=ಪೃಥ್ವಿ.ಬೇಳುವೆ=ಚಿಂತೆ,ಕಳವಳ. ಹವಿ=ಯಜ್ಞದಲ್ಲಿ ಅಗ್ನಿಗೆ ಆಹುತಿ ಕೊಡುವ ಹಾಲು, ತುಪ್ಪ ಧಾನ್ಯ ಇತ್ಯಾದಿ.



## ೪೦ ಪರಮೆ-ತುಂಬಿ

೧
ಕಾಳಿ ಗಾಳಿಯಲಿ ಗಾಡಿಯೇರುತಿರೆ
ಗಾಲಿ ತಿರುಗುತಿಹವು.
ಕಾಲಕಾಲಕೂ ಕಾಲ ತಾಲದಲಿ
ಗೆಜ್ಜೆ ಮಿರುಗುತಿಹವು.
೨
ಪ್ರಾರ್ಥಕೋಟಿ ಬೆಳುಮೀನ ಮಿಂಚುತಿವೆ
ಬಾನಿನೊಡಲಿನಲ್ಲಿ.
ಅಬ್ಜಕೋಟಿ ಬಾಳ್‌ಮೀನ ನೋಡುತಿವೆ
ಬದುಕುಗಡಲಿನಲ್ಲಿ
೩
ತುಂಬಿ ಮೊರೆದು ಪರಮೆಯನು ಕರೆಯುತಿದೆ
ತುಂಬು ಬಾಳಿಗಾಗಿ.
ಪರಮ ಜೀವನದ ಜೇನ ಕೂಡಿಸಲು
ಇಂದು ನಾಳೆಗಾಗಿ.
೪
ಠಾವು ಠಾವು ಇವು ಹೂವು ನೋಡು ಈ
ನಾವು ನೀವು ಕೂಡ.
ಹೂ ಹೂವು ಇದರ ರಸರಸವು ಬೆರೆಯೆ
ಮಧುಪಾಕವಹುದು ನೋಡ.
೫
ಹಾದಿ ಕಾಣದಲಿ ಹಾದಿ ತೆರೆಯುತಿದೆ
ಹಕ್ಕಿ ಹಕ್ಕಿಗಾಗಿ.
ಕೂಗಿ ಕರೆಯುತಿದೆ, ಕುಣಿದು ಒರೆಯುತಿದೆ
ಸಾಕ್ಷಿಪಕ್ಷಿಗಾಗಿ.

೬

ಇದು ಯಾವಗೀತಿ, ನವರೀತಿಯಲ್ಲಿ
ಭಯ ಭೀತಿ ತೊರೆದು ಬಂತು?
ನಾಂದಿಯಾಗಿ ನವನಾಟ್ಯ ನಡೆಸಿರಲು
ವಿಶ್ವ ನಟನೆ ನಿಂತು.

---

ಭಾವ : ಪೂರ್ಣತೆಯ ಮಧುರಸವನ್ನು ಕೂಡಿಸುವ ಜೀವದ ಪುರುಷ ಪ್ರಕೃತಿಭಾವಗಳುಂಟು. ಅದರಲ್ಲಿಯ ಗಂಡು ಪರಮೆ, ಹೆಣ್ಣು ತುಂಬಿ. ಒಂದು ಸೃಷ್ಟಿಯ ಅಂಚಿಗೆ ಹೋದರೆ, ಇನ್ನೊಂದು ಸೃಷ್ಟಿಯ ಕೇಂದ್ರಕ್ಕೆ ಎಳೆಯುವದು. ಈ ಎಳೆತ ಸೆಳೆತಗಳಲ್ಲಿ ಸೃಷ್ಟಿಯ ನವ್ಯಲೀಲೆ ತಲೆದೋರುವದು.

ಶಬ್ದಾರ್ಥ : ಪರಮೆ=ಶ್ರೇಷ್ಠಸುಂದರಿ, ತುಂಬಿ, ಭೃಂಗ, ಭ್ರಮರ, ಮಧುಕರ. ಗಾಡಿ=ಬಂಡಿ, ಶಕಟ.
ತುಂಬಿ ಮೊರೆದು ಪರಮೆಯನು ಕರೆಯುತಿದೆ-

"ಓವಮ್ಮನ (ovum-ಸ್ತ್ರೀ ಅಂಡಾಣು)ಮನೆಗೆ
ಪರಮಪ್ಪ (sperm-ವೀರ್ಯಬೀಜ) ಬಂದ
ಏನಂದ? ಚಂದ
ಆ ಕಂದ
ಯಾರಿಂದ
ಅಂದ."

(ಈ ಸಾಲು ಹಾಗೂ ನುಡಿ ೩ ರಲ್ಲಿ ಸಾದೃಶ್ಯ ಇದೆ.
ಅಂಬಿಕಾತನಯದತ್ತ-೧೯೭೪ರ ಅವತರಣಿಕೆಯಲ್ಲಿಯ ರಚನೆ. ಅಪ್ರಕಟಿತ)



# ೪೧ ಸುದರ್ಶನದಲ್ಲಿ

೧

ಮೂರು ಸಪ್ತಕದಾಚೆ ಮೊಳೆತ ನನೆದನಿಯಿಂದ
ಜೀವಮಂಡಲವು ಪರಿಪೂರ್ಣವಾದಂತೆ
ದೇವಕೇಂದ್ರದಿ ಕದಿರುತಿದ್ದ ಆಶೀರ್ವಾದ
ಫಲಿಪ ಸುಮುಸಮಯ ಅವತೀರ್ಣವಾದಂತೆ

೨

ಮೂಡಲಿನ ಕಡಲಿನಲಿ ಅಲ್ಲೋಲ ಕಲ್ಲೋಲ
ಮಂತ್ರಪುಷ್ಪದ ವೇದಘೋಷವಾದಂತೆ
ವಿಶ್ವಮಾತೆಯ ಪ್ರಾರ್ಥನೆಯ ಕೇಳಿ
ಶಾಂತಿ ಸಾಗರದ ಬಸಿರಲ್ಲಿ ಸಂತೋಷವಾದಂತೆ

೩

ಕೃಷ್ಣವರ್ಣದ ವಾಸುದೇವ ಬೀರಿದ ಬೆಳಕು
ಘನನೀಲ ಗಗನದಲಿ ಸೋಸಿ ಬಂದಂತೆ
ನೀಲಘನವೃಷ್ಟಿಯನ್ನುಂಡಾ ವಸುಂಧರೆಯು
ಹಸಿರಿನಲಿ ಕಾಮನನೆ ಹಡೆದು ತಂದಂತೆ

೪

ಮೂಲವರ್ಣವದೊಂದು ನೀಲಿ ಬಣ್ಣದ ಆಚೆ
ಚಾಚುತಿದೆ ಹೊಸ ನಸುಕು ಮೂಡಲಿರುವಂತೆ.
ಆ ಸುದರ್ಶನದಲ್ಲಿ ನವರಾಗರೇಖೆಯಿರೆ
ಕಣ್ಮುಚ್ಚಿ ಲೋಕವಿದೆ, ಮೂಢರಿರುವಂತೆ.

---

ಭಾವ : ಶ್ರೀ ಅರವಿಂದರ ಮತ್ತು ಶ್ರೀಮಾತೆಯವರ ಸು-ಪ್ರ-ಮಾನಸದ ಅಪ್ರಮೇಯ ಕಿರಣಗಳು ಸೃಷ್ಟಿಮಂಡಳವನ್ನು ಸೇರಿದಾಗ ನಾದವರ್ಣಗಳ ಇನ್ನೊಂದು ಗ್ರಾಮ ತೆರೆಯುವದು. ಅದರ ಸೋಂಕಿಗೆ ಉತ್ತರಕೊಡುವ ಶಕ್ತಿ ಇಲ್ಲದವರು ಮನದ ಘನನಿದ್ರೆಯಲ್ಲಿಯೇ ಎಂದಿನಂತೆ ಹಿಂದಿನ ಕನಸು ಕಾಣುವರು. ಇದು ಮಾನವತೆಯ ಮೌಢ್ಯ.

ಶಬ್ದಾರ್ಥ : ಕದಿರು=ಪ್ರಕಾಶಿಸು.

# ೪೨ ಆತ್ಮಪ್ರಜ್ಞೆ

೧

ಆ ಆತ್ಮಪ್ರಜ್ಞೆ ದಿಗ್ದೇಶ ಮುಟ್ಟೆ ಎಂಟೆದೆಯೆ ರೂಪ ತಳೆದು
ಅಗೋ ಬ್ರಹ್ಮಬಿಂದು ಚೈತನ್ಯದಿಂದ ಷಡ್ಗುಣಿಸಿ ಘನದಿ ಬೆಳೆದು
ಈ ಕಾಲಕಾಲಕೂ ವಿಶ್ವಪ್ರಜ್ಞೆ ಆದಿತ್ಯರಂತೆ ಬೆಳಗೆ
ಋತುಮಾನದಲ್ಲಿ ಚಾತುರ್ಯಗೊಂಡು ನಲಿಯುವೆವು ಹೊರಗೆ ಒಳಗೆ.

೨

ತಾನಿರುವದೊಂದು ತಾನರಿವದೊಂದು, ಎರಡೊಂದು ಪಿಂಡಗೊಂಡು
ಮುದವಾಗಿ ನಲಿದು, ತಕ್ಕೈಸಿ ಒಲಿದು, ಎದೆಹಾಲನುಂಡುಕೊಂಡು
ಸ್ಥಿತಪ್ರಜ್ಞೆಯಲ್ಲಿ ಸಂಚರಿಸಲೆಂದು ವಿಜ್ಞಾನ ನೇತ್ರವಾಗಿ.
ಮನಪ್ರಾಣಗಳಲಿ ಮೈಯಾಡಿಸುವದು ಸುಜ್ಞಾನಕ್ಷೇತ್ರವಾಗಿ,

೩

ಬಯಲಾಗಿ ಒಳಗೆ, ಬಾನಾಗಿ ಹೊರಗೆ, ಇಹುದೊಂದೆ ಜ್ಯೋತಿಯಣ್ಣ;
ಗಾಳಿಯಲಿ ಸುತ್ತಿ ಬೆಳಕಾಗಿ ಮುತ್ತಿ ತೆರೆಯುವದು ಏಳು ಬಣ್ಣ.
ಮೇಲಿಂದ ಬಂದು ಕೆಳಗಿಳಿದುಕೊಂಡು ಮೆಟ್ಟಲವ ನೆಲಿಸುತಿಹುದು;
ಬೆನ್ನಾಗಿ ಹಿಂದೆ, ಮೈಯಾಗಿ ಮುಂದೆ ಅಂಗಾಂಗ ಒಲಿಸುತಿಹುದು.

೪

ಬಲಕ್ಕೊಮ್ಮೆ ಒಲೆದು, ಎಡಕ್ಕೊಮ್ಮೆ ಚಲಿಸಿ, ಸಮತೂಕ ಕಲಿಸುತಿಹುದು
ಆನಂದ ಪ್ರಕೃತಿ ಚಿತ್ ಪುರುಷನಿಂದ ಸತ್‌ಪುತ್ರ ಸಲಿಸುತಿಹುದು.
ಈ ಗಂಧಮೂರ್ತಿ ರುಚಿಗೊಂಡು ಆರ್ತಿ ಏಳ್ಬಣ್ಣ ಪಿಂಡವಾಗಿ
ಬ್ರಹ್ಮಾಂಡ ಸ್ಪರ್ಶ ಪಡೆದಿರುವ ಪಕ್ಷಿ ಹಾಡಲಿ ಅಖಂಡವಾಗಿ.

---

ಭಾವ : ಆತ್ಮಪ್ರಜ್ಞೆಯ ಸಾಂಖ್ಯ ಸ್ವರೂಪವನ್ನು ರೂಪಿಸಿಕೊಳ್ಳುವಾಗ ಭಾವದ ಸಡಗರದಲ್ಲಿ ನವೋನವ ಅಲಂಕೃತವಾದ ಪ್ರತಿಮೆ ಒಡಮೂಡುವದು.

ವಿಶೇಷ : ಐಶ್ವರ್ಯ, ಜ್ಞಾನ, ಯಶಸ್, ಶ್ರೀ, ವೈರಾಗ್ಯ ಹಾಗೂ ಧರ್ಮ ಎಂಬ ಆರು ಗುಣಗಳುಳ್ಳವನೇ ಭಗವಾನ್. ಇಂಥ ಈ ಭಗವಂತನ ಅರಿವು ಪ್ರತಿಯೊಬ್ಬನ (೧) ಎಡ (೨) ಬಲ (೩) ಹಿಂದೆ (೪) ಮುಂದೆ, (೫) ಮೇಲೆ (೬) ಕೆಳಗೆ (೭) ಹೊರಗೆ (೮) ಒಳಗೆ. ಹೀಗೆ ಎಂಟೂ ದಿಕ್ಕಿನಿಂದ ಆದಾಗ ಮಾತ್ರ ಅದು ಆತ್ಮಪ್ರಜ್ಞೆಯಾಗಿ ಸ್ಥಿರವಾಗುತ್ತದೆ.

# ೪೩ ಮಧ್ವ

೧
ಹಸಿವೆಯೋ ಹಸಿನಾತವೆಂದು ಭೂತಪ್ರೇತ
ಯೋನಿಯೋನಿಯ ತಿರುಗಿ ಕಳೆದೆ ದ್ವಾಪರ ತ್ರೇತ :
ಪಂಚೇಂದ್ರಿಯದ ಪಂಚ ಬಾಣಗಳ ಬೆನ್ನೇರಿ
ಉಂಡುದನೆ ಉಂಡು ಕಂಡುದ ಕಂಡು ಮನಸಾರಿ
ಬಂದೆನಿದೊ ನಾನಹಂಕಾರಶಿಖರಕೆ ಹಾರಿ
ಮುಂದುಗಾಣದೆ ಗಾಣದೆತ್ತಿನೊಲು ತಿರುಗುತ್ತ
ಬಯಲ ಬಸಿರಿನ ಬಟ್ಟೆ ಎತ್ತೊ ಎತ್ತೋ ಎನುತ
ರೆಕ್ಕೆಯೊಡೆಯದ ಹಕ್ಕಿಮರಿಯಂತೆ ದಿಟ್ಟಿಸುತ.

೨
ನನ್ನ ಪ್ರಾಣಸ್ಪಂದದೊಂದಿಗೇ ಮಿಣುಕುತಿಹ
ಅಂತರಿಕ್ಷದ ಅಂತರಾಳದಾಳದ ಚುಕ್ಕೆ !
ಚೆಲುವಕ್ಕೆ ನಲಿವಕ್ಕೆ ಬಲವು ಒಲವುಗಳಕ್ಕೆ
ಶುಭಮಕ್ಕೆ ನಮ್ಮ ದೃಷ್ಟಾದೃಷ್ಟಿ ಯೋಗಕ್ಕೆ.
ಉದಯಿಸಲೆ ಹೃದಯಗಹ್ವರದಿಂದ ಮೇಲ್ದೋರ
ಆನಂದತೀರ್ಥದಲಿ ಮಿಂದ ಮಧ್ವ ಅಪಾರ !

---

ಭಾವ : ದೇಹ, ಪ್ರಾಣ, ಮನ, ವಿಜ್ಞಾನಗಳ ಕೋಟೆ ಭೇದಿಸಿ ಆನಂದದ ಸ್ಪರ್ಶ ಪಡೆಯಬೇಕಾಗುತ್ತದೆ.

ಶಬ್ದಾರ್ಥ : ತೋರ=ದೃಶ್ಯ. ದೊಡ್ಡ ಸ್ಪಷ್ಟ ಆಕಾರ.



# ೪೪ ಮೋದ ಹರುಷದ ಸಸಿ

೧

ಮೋದ ಹರುಷದ ಸಸಿಯು, ಮತ್ತೆ ಪ್ರ-
ಮೋದ ಬಿದಿಗೆಯ ಶಶಿಯು, ಪ್ರಿಯದ ವಿ-
ನೋದ ಹಿಗ್ಗಿನ ಹಸಿವು, ನಂದಾನಂದವೇ ಪ್ರಾಣ.
ಊದುತಿದೆ ಉಸಿರಾಡುತಿದೆ ಬ್ರ-
ಹ್ಮಾದಿ ತೃಣಪರ್ಯಂತ ಒಂದೇ
ನಾದ ಅಹಮಸ್ನಾದ ಬ್ರಹ್ಮಾಸ್ವಾದ ನಿರ್ಘೋಷ.

೨

ಕಮಲ ವನವರಳಿಹುದು ತುದಿ ಮೊದ-
ಲಮಲಸಾರಸ್ವತದ ಗೀತದ
ವಿಮಲ ಪರಮಾಮೋದ ಬೋಧದ ನಿಧಿಯೆ ತೆರೆದಂತೆ ;
ಮಮತೆ ಸಮತೆಯುಲಡಗಿ ನಿಂತಿತು ;
ಭ್ರಮಣ ಮಾರ್ಗಕ್ರಮಣ ಮಧುವನ
ಗಮನ ನುಡಿಸುತ್ತಿಹುದು ಝೇಂಕಾರದೊಳೆ ಓಂಕಾರ.

೩

ಎದೆಗೆಯೆದೆ ಕರೆದಂತೆ, ಹೃದಯದ
ಉದಧಿ ತೆರೆತೆರೆ ಹರಿದು, ಹರುಷದ
ವಿಧವಿಧದ ಚೆಲ್ಲಾಟ ಮಾಟವು ಅಲ್ಲೆ ನೆರೆದಂತೆ,
ವಿಧಿಯ ಯಾವ ವಿಲಾಸಲಾಸ್ಯವೊ
ಕದಿಯುತಿದೆ ಹೃನ್ಮನದ ಬಿನದವ;
ಅದು ಅದೋ ದಿಕ್ಕೆಲ್ಲ ಒಂದೇ ನಾದ ಪಡಿಸಾದ.

---

ಭಾವ : ಆನಂದ ಜೀವನದಲ್ಲಿಯೂ ಧ್ವನಿಸುವದು. ಆಗ ಎಳೆಗೆ ಎಳೆ ಕೂಡಿಸಿ ನೆಯ್ಗೆ ಮಾಡುವದು ಕಷ್ಟ. ಆದರೂ ಅದು ಬಿಟ್ಟ ಕರ್ಮವಲ್ಲ.

ಶಬ್ದಾರ್ಥ : ಮೋದ=ಸಂತೋಷ. ಬಿನದ=ವಿನೋದ.

# ೪೫ ನೀರು

೧
ಚಣಚಣಕು ತಣಿವಿಲ್ಲ, ಏನಿದು ಹರಿವ ನೀರಿನ ಕಳವಳ ?
ಏಕೊ ಮೊರೆಯುತ ಎತ್ತೊ ಹರಿಯುತ ಅಳುತಲಿಹುದೇ ಕಳವಳ ?
೨
ನೆಲದ ಎದೆ ಸಿಹಿನೀರು ಕಂಬನಿಗಡಲ ಒಡಲಿಗೆ ಅರ್ಪಣ,
ಯಾವ ಶ್ರದ್ಧಾಬುದ್ಧಿ ಕೊಡುತಿದೆ ತೀರಲಾರದ ತರ್ಪಣ ?
೩
ಉಗಮದಲಿ ತೋಡುವದು ಯಾವದೊ ಎದೆಯ ಆಳದ ಜಲಹರಿ ?
ಜಲಧಿ ಕಲ್ಲೋಲದಲಿ ಕೂಡಲದಲ್ಲಿ ಮುಗಿವುದು ಈ ಪರಿ.
೪
ನಿಲ್ಲಲಾರದ ಚಂಚಲತೆಯೇ ತೊರೆಯ ಹೆಸರಿಗೆ ಆಸರ.
ಜಲಕೆ ಜಡವೆನಲೆಂತು ? ಇದಕೋ ಇಲ್ಲ ಹರಿಯುವ ಬೇಸರ.
೫
ಆದರೂ ಇಷ್ಟೇಕೆ ಇಹುದೋ ತಂಪುನೀರಿಗೆ ತಳಮಳ ?
ಮುಗಿಲುಗನ್ನಡಿ ಬಿಡಿಸಿದಂತಿಹ ಜಲದ ಮೈಯಿದೆ ಜಳಜಳ.
೬
ಮೋಡ ಎರೆವುದು ಮಲೆಯ ತಲೆಯಲಿ, ಬೆಟ್ಟ ಸುರಿವುದು ಕೊಳ್ಳಕೆ.
ಕೊಳ್ಳ ತೊರೆವುದು ನದಿಗೆ, ಎಲ್ಲವು ಮತ್ತೆ ಕಡಲಿನ ಹಳ್ಳಕೆ.
೭
ಸೂರ್ಯರಶ್ಮಿಯ ಸೇರಿ ಸೇರುವದಣ್ಣ ಬಾನಿನ ಏರಿಗೆ.
ನೆಲವೆ ನೀರಡಿಸಿರಲು ಕರೆವುದು ಗಿಡಮರದ ತಾಯ್ಬೇರಿಗೆ.
೮
ಜನ್ಮಮರಣದ ಚಕ್ರದಂತಿದೆ ವಕ್ರಮಾರ್ಗವು ನೀರಿಗೆ.
ಬೇಕು ಈ ಅಭಿಸರಣದಂದದ ಅಧಃಪತನವು ಯಾರಿಗೆ ?
೯
ತಿರೆಯ ಎದೆಯೊಳಗಿರುವ ಕಂಪಿನ ಅಲರನರಳಿಸಲಾಗಿಯೋ
ಅರಳ ಬಸಿರಲಿ ಕಾತು ಪಾಡನು ಪಡೆದು ಕಾಲಕೆ ಮಾಗಿಯೋ
೧೦
ಹಣ್ಣು ರಸವೆನಿಸುತ್ತ ಜೀವದ ಹಸಿವ ತಣಿಸಲು ಬರುವೆಯಾ ?
ರಕ್ತದಲಿ ಒಂದಾಗಿ ಹೃದಯದಿ ಮತ್ತೆ ನಲಿವನು ತರುವೆಯಾ ?

೧೧
ಎಲೆಲೆ ನೀರೇ, ದೂರದೀ ಗುರಿ ಈ ಪ್ರವಾಹದಿ ನೆಲೆಸಿದೆ.
ಅಂತೆಯೇ ನಿನ್ನೊಳಗಿನೊಳಗಿನ ಸ್ಥೈರ್ಯ ವೈಯಲಿ ಚಲಿಸಿದೆ.
೧೨
ನಿನ್ನ ಜೀವನ ಕುಡಿದು ಸುತ್ತಗೊ ಮಣ್ಣ ತುಂಬಿದೆ ಜೀವನಾ.
ಬೆಳಕಿಗೆತ್ತಲು ಕಣ್ಣ ತೆರೆದಿದೆ ಹುಡುಕ ಬಯಸಿದೆ ದೇವನಾ.
೧೩
ತಾಯಿ ಎದೆಸೆರಗನ್ನು ಅವಚಿರುವಂಥ ಕೂಸಿನ ಅಂದದಿ
ಬೇರ ಹಿಡಿಯಲಿ ತಿರೆಯ ಹಿಡಿಯುತ ಮೊಗವ ತಿರುಹಿದೆ ಚೆಂದದಿ.
೧೪
ಪಲ್ಲವಿಸಿ ಹೂವಾಗಿ ಹರುಹಿದೆ ಹಸಿರು ಪ್ರಾಣದ ಹಂದರಾ.
ಕತ್ತಲೆಯ ಗರ್ಭವನೆ ಬೆಳಗಿಸಬಂದನಗೊ ಆ ಚಂದಿರಾ.
೧೫
ನೀರ ದಂಡೆಗೆ ಹಸಿರು ಎದ್ದಿದೆ ಗಾಳಿಗಿದೊ ತಲೆದೂಗುತ,
ಮರಮರವು ಮರ್ಮರಿಸುತಿದೆ ಹವಣಾಗಿ ಬಳುಕುತ ಬಾಗುತ.
೧೬
ತಲೆಯಲಲೆದರು ಬುಡದೊಳಿದೆ ನೆಲೆಗೊಂಡ ನಿಲವಿನ ನಿಕ್ಕಳ.
ಮರದ ನೆಲೆ ನೋಡುವದು ನಡುಗಿಸಿ ಸ್ಥಿರದ-ಚಂಚಲದಿಕ್ಕಳ.
೧೭
ಮೈಯು ಮುಳ್ಳಿಡಬಹುದು ಆದರು ಮನದೊಳಗೆ ಇದೆ ಧೈರ್ಯವು.
ನಡುಕದಲ್ಲಿಯು ಉಡುಗಲಾರದ ವೀರ್ಯವೇ ಸೈ ಸ್ಥೈರ್ಯವು.
೧೮
ಹರಿವ ಹೊಳೆಗಳ ಆಚೆ ನಡುಗುವ ಮರಗಳಾಚೆಗೆ ಒಳಗಿದೆ.
ಮರದ ನಡುವಿನ ಬಯಲು ಸುತ್ತಿನ ಬನದ ಒಳಗನೆ ಬೆಳಗಿದೆ.

---

ಭಾವ : ಸೃಷ್ಟಿಗೆ ಆಧಾರ ನೀರಂತೆ. ಸೃಷ್ಟಿಯಲ್ಲಿ ಹರಿದಾಡುವ ನೀರು ತನ್ನ ಲೀಲಾವಿಲಾಸದಲ್ಲಿ ಅದನ್ನು ವಿವಿಧ ವೈಚಿತ್ರ್ಯದಿಂದ ವ್ಯಂಜಿಸುತ್ತದೆ. ಆ ಸಾತ್ವಿಕ ಭಾವದಲ್ಲಿ ಸವಕಂಪನವಿದೆ.

ಶಬ್ದಾರ್ಥ : ಕಾತು=ಕಾಯಿಬಿಟ್ಟು, ಅಭಿಸರಣ=ಪ್ರಿಯೆ, ಪ್ರಿಯಕರನ ಭೇಟಿಗಾಗಿ ಸಂಕೇತ ಸ್ಥಳಕ್ಕೆ ಹೋಗುವುದು, ಎದುರಾಗು.

# ೪೬ ಬೆಳಕು ತುಂಬಿದೆ ಒಡಲಲು

೧
ಬೆಳಕು ತುಂಬಿದೆ ಒಡಲಲು
ತುಂಬುಹಾಲಿನ ಕಡಲೊಳು
ಬೆನ್ಗೆ ಇಳಿಸುತ ಮೈಯ ಬಾಲವ, ತಲೆಗೆ ನೀಡುತ ಹೆಡೆಯನು,
ಹಾವು-ಜೀವವು ಎತ್ತಿ ಹಿಡಿದಿದೆ ಕೋಟಿ ಮಣಿಗಳ ಕೊಡೆಯನು
೨
ಪ್ರಾಣಪತಿ ಜೀವೇಶ ಹೃದಯದಧೀಶ ಅಂತರ್ಯಾಮಿಯು
ಗುಟ್ಟಿನೊಳು ಸುಪ್ರೇಮಿಯು
ಹುಟ್ಟಿಗೆಲ್ಲಕು ಸ್ವಾಮಿಯು
ನಿದ್ದೆಮರೆಯಲಿ ಮಿದ್ದುತಿರುವನು ಸರ್ವಕಾಮದ ಕಾಮಿಯು.
೩
ಮುಕ್ತಲಯದಲಿ ನಡೆಯುತ
ಛಂದಭಾವಕೆ ಒಲಿಯುವಂದದಿ ನಮ್ಮ ಒಲುಮೆಗೆ ಒಲಿಯುತ
ಭಕ್ತಿ ತಾಲವ ಹಿಡಿಯುತ
ಜ್ಞಾನತೇಜದ ಗೊಂಬೆ ಮಾಡುವ ತನ್ನ ಲೀಲೆಗೆ ನಲಿಯುತ

---

ಭಾವ : ಜಗತ್ತಿನಲ್ಲಿ ತುಂಬಿದ ಸ್ವಾಮಿ ನಮ್ಮ ನಿಮ್ಮಲ್ಲಿಯೂ ತುಂಬಿಕೊಂಡಿದ್ದಾನೆ. ಅವ್ಯಕ್ತವನ್ನು ವ್ಯಕ್ತಗೊಳಿಸುವ ಮೂರ್ತಲೀಲೆಯಲ್ಲಿದ್ದಾನೆ. ಅದರ ದ್ರವ್ಯ ಪ್ರಕಾಶ. ಈ ಅನುಭಾವ ಬರಲು ಪ್ರತಿಯೊಬ್ಬರ ಬೆನ್ನಿನ ಹುರಿಯನ್ನು ವ್ಯಾಪಿಸಿರುವ ಕುಂಡಲಿನಿ ಶಕ್ತಿ-ಸರ್ಪ (ಮೂಲಾಧಾರ ಚಕ್ರದಿಂದ ಆಜ್ಞಾಚಕ್ರದವರೆಗೆ-ತಲೆಯ ಮೇಲೆ ಸಹಸ್ರ ಹೆಡೆಯ ಸರ್ಪ ಹಾಗೂ ಮೂಲಾಧಾರಕ್ಕೆ ಬಾಲ) ಸ್ಪಂದಿಸುತ್ತ ಶುರುವಾಗ ಪ್ರಕಾಶ ಸ್ಫುಲಿಂಗಗಳ ದರ್ಶನವಾಗುತ್ತದೆ ಎಂದು ಜ್ಞಾನಿಯೋಗಿಗಳು ಅನುಭವಿಸಿ ಹೇಳಿದ್ದಾರೆ.



# ೪೭ ಶ್ರೀ ವಿಶ್ವನಲ್ಲಿ ಯಜಮಾನನಾಗಿ

೧

ಶ್ರೀ ವಿಶ್ವನಲ್ಲಿ ಯಜಮಾನನಾಗಿ ಜೀವಾತ್ಮ ನಾನು ಬಂದೆ.
ಇಗೊ ಚಿತ್ತದಲ್ಲಿ ಪುರುಷಾತ್ಮಗಾಗಿ ಚೈತ್ಯಾಗ್ನಿ ಹೊತ್ತಿತೆಂದೆ.
ಉಸುರುಸಿರಿನಲ್ಲಿ ಪ್ರಾಣವನೆ ನಿನಗೆ ಆಹುತಿಗಳಾಗಿ ತಂದೆ.
ಬಾ ದೇವ ಬಾರೊ, ಮಹದೇವ ಬಾರೊ, ಬಾ ವಾಸುದೇವ ತಂದೇ.

೨

ಈ ಜೀವ-ಚೈತವನೆ ಗುಡಿಯ ಮಾಡಿ ನಿಂತಿರುವ ನನ್ನ ದೇವ,
ನನ್ನೊಳಗು ಹೊರಗು ನೀ ಬಲ್ಲೆ ಜೀಯ ಕ್ಷೇತ್ರಜ್ಞ ಜೀವಜೀವ.
ಮಹಮೂರ್ತಿ ಮಾಡು, ಅಚ್ಯುತ್ತು ಎತ್ತು ಗುರುಪಾದದಲ್ಲಿ ನನ್ನ
ಎಚ್ಚತ್ತು ನಿಂತ ಭಗವಂತ ಇನ್ನು ತಡವೇಕೆ ನನ್ನ ಚೆನ್ನ?

೩

ಎಷ್ಟೊತ್ತು ನಾನು ಮೊಗಹಾಕಿ ಕೆಳಗೆ ನೋಡುವೆನು ನೀರಿನಲ್ಲಿ;
ಕಂಡಂತೆ ಏನೊ ಕಾಣುವದೊ ಮೂಲ ಕಳೆಯಿಲ್ಲವೇನೊ ಅಲ್ಲಿ?
ಮೊಗವೆತ್ತಿ ನನ್ನ ಮುತ್ತಿಟ್ಟು ನಿನ್ನ ಮೊಗದೋರು ಬೇಗ ಚೆನ್ನ.
ನೀ ಬಿಂಬನಿರಲು ಪ್ರತಿಬಿಂಬವೇಕೆ, ಬಾ ತುಂಬ ತುಂಬು ನನ್ನ.

೪

ನಿನ್ನ ಕೃಪೆಯ ಇಳಿಬೆಳಕಿನಲ್ಲಿ ಸುಳಿಯೇರಿ ಬಂತು ಪ್ರೀತಿ.
ಜನರ ನೀತಿಯಲಿ ಹೂತು ಬಂತು ಹೊಸದೊಂದು ಜೀವರೀತಿ.
ಸಾಕು ತಾಯಿ ಈ ಹೂವುಗಳನು ಫಲ ಪಕ್ವವಾಗುವಂತೆ.
ಅಣ್ಣ ತಮ್ಮದಿರ ಕಾಯಬೇಕು ಹುಲುದೃಷ್ಟಿ ತಾಗದಂತೆ.

೫

ಮಣ್ಣಿಯ ತೆರೆಯ ತೆರೆದದ್ದೆ, ಉಸಿರ ಸೀಳಿದ್ದೆ ಒಂದೆ ತಡವು
ಬಗೆಬಗೆಯ ಬಗೆದು, ಬಾನೆಲರ ನೆಗೆದು ಜೀಂತವಾಗಿ ಜಡವು
ಇದೊ ಭಿನ್ನಕರಣ, ಇಗೊ ನನ್ನ ಹರಣ, ಅಗೊ, ನಿನ್ನ ಚರಣಕಾಗಿ
ಎಲೆ ತಂದೆ, ಬಂತು ಎದೆಗೊದಗಿ ನಿಂತು ತಾಯ್ದೆರಗ ಸೇರಲಾಗಿ,

೬

ನಂಬಿಗೆಯೆ ತಾಯಿ, ನಂಬಿಗೆಯೆ ಬಸಿರು, ನಂಬಿಗೆಯೆ ಪಿಂಡವಣ್ಣ.
ನಂಬಿಗೆಯೆ ಹುಟ್ಟಿ ನಂಬಿಗೆಯ ಕಟ್ಟಿ ನಂಬಿಗೆಯ ಪಡೆದು ಕಣ್ಣ,
ತಂಬಿಗಿಯ ಒಳಗೆ ತುಂಬಿರುವ ನೀರೆ ವರಶಕ್ತಿ ಎನಿಸುವಂತೆ
ಆಳಾಗಿ ಹೊರಟು ಆಳುವದು ಜಗವ ಪೆರುಮಾಳೆ ಜನಿಸುವಂತೆ.

## ೪೯ ಜೊಂಪಿಸಿತ್ತು ಮಣ್ಣು

೧

ಜೊಂಪಿಸಿತ್ತು ಮಣ್ಣು ಮಣ್ಣು
ಎವೆ ತೆರೆಯದ ಕೂಸು-ಕಣ್ಣು
ಮೊಳಕೆ ಬರದೆ ಗಣಕೆಗಣ್ಣು
ಎಲ್ಲೊ ಇತ್ತು ಚಿಗುರುಬಣ್ಣ
ಹೂಹೂವಿನ ಚಿತ್ರವರ್ಣ

೨

ನಿದ್ರಿಸುತಿದೆ ಕಂಪಕಂಪ
ಅಡಗಿದೆ ಎಲೆ ಪಸರ ಜೊಂಪ
ಸವಿ ನುಂಗಿದೆ ತನ್ನ ಹಂಪ
ಬಸಿರು ಬಯಲು ಪೊಳ್ಳುಗುಂಭ

೩

ಬಂಜೆಗಾಳಿ ಆದರ ತುಂಬ
ಜಪಿಸುತಿರೋ ಶಪಿಸದಿರು
ಕುಪಿಸದಿರೋ ತಪಿಸುತಿರು
ಉಸಿರು ಮಸೆದ ಉರಿಯು ಆಗ
ಬೇಗೆ ಹತ್ತಿದಂತೆ ಬೇಗ.

೪

ತಲೆ ಮೊಳೆವುದು ಬಿದ್ದ ಬಿತ್ತು;
ಸಿಂಪಿ ತೆರೆದು ಬಹುದು ಮುತ್ತು.
ಅಲ್ಲಿವರೆಗು ಮೌನ ಗುರು.
ಆದರ ಶಿಷ್ಯ ನೀನಾಗಿರು.

---

ಭಾವ : 'ಸಾವಿತ್ರಿ' ಅನುವಾದ ಕಾಲಕ್ಕೆ ಸ್ಫುರಿಸಿದ ಕವನ.

ಶಬ್ದಾರ್ಥ : ಹಂಪ=ಹೆಚ್ಚಳ, ಅಭಿವ್ಯಕ್ತಿ. ಕುಪಿಸು=ಸಿಟ್ಟಿಗೇಳು. ಬೇಗೆ=ಬೆಂಕಿ, ತಳಮಳ.

# ೫೦ ನೋವೋ ನೋವು

೧
ಓಹೋ ನೋವು ನೋವೋ ನೋವು
ಜೀವವೆ ಇಲ್ಲದ ಒಣಒಣ ಸಾವು;
ಕಾಯದ ಕಾಯದ ಬಂಜೆಯು ಹೂವು
ಪೊರೆಯಿದೆ; ಹೋಗಿದೆ ಎಲ್ಲೊ ಹಾವು.

೨
ನಾನೆನ್ನದು ನನೆಯದ ಹುಸಿ ಜೀವ
ತಾನಿಗೆ ಸಾಕಾಗದು ತುಸು ಭಾವ
ಜೊಳ್ಳೋ ಜೊಟ್ಟ ಟೊಕ್ಕೆನೆ ಖೊಟ್ಟಿ
ಹುರುಳಿಲ್ಲದ ಬರಿ ಶಬ್ದವು ಹುಟ್ಟಿ
ಎಣಿಸಿದರೇನದು, ಗುಣಿಸಿದರೇನು ?
ತಲೆಕೆರೆ ತುಂಬಾ ಸೀರು ಹೇನೂ!

೩
ಧೃಷ್ಟಬುದ್ಧಿಯಿದೆ ಕುಂತಲದಲ್ಲಿ;
ಮದನವಿಷಯೆ ಅವರಾಡುವರಲ್ಲಿ.
ಬಾನಿನಲ್ಲಿ ಘನಛಾಯೆಯು ಇಲ್ಲ;
ಕೃಷ್ಣ ಕಾಣದೇ ಮಾಯೆಯು ಹೊಲ್ಲ.
ನೋವಿನಲ್ಲಿ ನೋಂಪಿಯ ಹಸಿ ಬೇಕು;
ಜೀವಕೆ ಜೀವನ ರಸ-ಕಸಿ ಬೇಕು.

೪
ಮಂತಣದಲ್ಲಿಯು ಚಿಂತನವಿರಲಿ;
ಚಿತ್ತವು ಒಳಗನು ಚಿತ್ರಿಸಿ ಬರಲಿ.
ತಂತಿ ತಂತಿ ತಂತನದ ವಿತಾನಾ
ಹಾಸು ಹೊಕ್ಕು ಮುಂಮೌನಾ ಗಾನಾ!

---

ಭಾವ : 'ಸಾವಿತ್ರಿ' ಅನುವಾದದ ಕಾಲಕ್ಕೆ ಸ್ಫುರಿಸಿದ ಕವನ.

ಶಬ್ದಾರ್ಥ : ಸೀರು=ಹೇನಿನ ಮೊಟ್ಟೆಯನ್ನು ತೆಗೆ, ಬಾಚು. ಮಂತಣ=ಆಲೋಚನೆ. ರಸ-ಕಸಿ=ದೇವನ ರಸವನ್ನು ಜೀವನೊಂದಿಗೆ ಕಸಿ-ಕಲಮು ಮಾಡುವ ಪ್ರಯತ್ನ

# ೫೧ ಪ್ರಾಣಪಕ್ಷಿ

೧

ಕಣ್ಣು ಕಾಮಾಕ್ಷಿ, ಮನವು ಮೀನಾಕ್ಷಿ,
ಚಿತ್ತ ಚೈತ್ಯ ಸಾಕ್ಷಿ.
ಪಕ್ಷಪುಚ್ಛ ಮೈ ಚೂಚು ಚಾಚಿದರು
ಬೇರೆ ಪ್ರಾಣಪಕ್ಷಿ.

೨

ದೃಷ್ಟಿ ದಿಟವೆಂಬೆ, ಸೃಷ್ಟಿ ಸಟೆಯೆಂಬೆ,
ದೃಷ್ಟ ನಷ್ಟವೆಂಬೆ.
ಕಾಂಬುವನ ನಂಬೆ, ಹುಸಿ ಚಿಗುರ ಕೊಂಬೆ,
ಓ ಹೇಡಿ-ಮಣ್ಣ ಗೊಂಬೆ !

೩

ಕಿಡಿ ಇಲ್ಲದಲ್ಲಿ ಕುಡಿ ಒಡೆವುದೆಂತು ?
ಮಿಡಿ ಹಿಡಿವುದೆಂತೊ ಕಾಣೆ,
ತಂತಿ ಝಣಗುಡದ ಪೊಳ್ಳು ಸೊಟ್ಟೆ
ಎನಿಸೀತು ಹೇಗೆ ವೀಣೆ ?

---

ಭಾವ : 'ಸಾವಿತ್ರಿ' ಅನುವಾದದ ಕಾಲಕ್ಕೆ ಸ್ಫುರಿಸಿದ ಕವನ.

ಶಬ್ದಾರ್ಥ : ಸಟೆ=ಸುಳ್ಳು. ಕಾಂಬುವನ=ಕಾಣುವವನ. ಸೊಟ್ಟೆ=ಡೊಂಕೆ, ವಕ್ರವೆ.

## ೫೨ ರಕ್ತಾಕ್ಷಿ

೧

ರಕ್ತಾಕ್ಷಿ ರಕ್ತಾಕ್ಷಿ ಭೌತಬಿನ್ನಣದಕ್ಷಿ
ಹಾರಿಸಲಿ ಬಾರಿಸಲಿ ಮಾತಿನ ಪಟಾಕ್ಷಿ.
ಇದುಳು-ಕುತ್ತಕೆ ಅತ್ತ ಹೊತ್ತುರುಳಿಸಿತು ಕತ್ತು.
ಬಂಜೆ ಸಂಜೆಯ ಸುತ್ತುವುತ್ತು ಗುಲಬಾಕ್ಷಿ.

೨

ಕರಿಗೊರಳ ಸುತ್ತ ಹಾವಿನ ಹುತ್ತ ಕೆಳಗಿತ್ತು
ಜೋತಾಡುತಿದೆ ತಾನೆ ಒಂಟಿ ರುದ್ರಾಕ್ಷಿ.
ಬೆಳ್ಳಿ ಬೆಳಗಲಿ ಕಾಕ-ನಿಶೆಯಲ್ಲಿ ದಿಶೆಯಲ್ಲಿ
ಧ್ರುವನ ಆನಂತ್ಯಕ್ಕೆ ಕೂಟಸಾಕ್ಷಿ.

೩

ಆ ರಕ್ಷಿ ಈ ರಕ್ಷಿ ದಿವ್ಯಮಾತೆಯ ರಕ್ಷಿ.
ಹಿಮನಗದ ಜಗದ ಸೌಭಾಗ್ಯ ಯಕ್ಷಿ.

---

ಭಾವ : 'ಸಾವಿತ್ರಿ' ಅನುವಾದದ ನಿರೀಕ್ಷೆಯ ಬಗೆಯ ವರ್ಣನೆ.

ಶಬ್ದಾರ್ಥ : ಕೂಟಸಾಕ್ಷಿ=ಸುಳ್ಳುಸಾಕ್ಷಿ ಯಕ್ಷಿ=ಜೈನರಲ್ಲಿ ಒಂದು ದೇವತೆ, ಕುಬೇರನ ಹೆಂಡತಿ, ಮಾಟಗಾರ್ತಿ.

# ೫೩ ಮುಗಿದಿತ್ತು ಬೀದಿಮಾತು



೧
ನೆಲ ಹೊರಳುತಿತ್ತು
ನೀರುರುಳುತಿತ್ತು
ಬೆಳಕರಳುತಿತ್ತು ಆಗ.
೨
ಬಿರುಗಾಳಿ ಧೂಳಿ
ಆಕಾಶ ಕಾಳಿ
ಎತ್ತಿತ್ತು ಅಪ್ಪರಾಗ.
೩
ಅಬ್ಬಬ್ಬ ಚುಕ್ಕೆ
ಏನೊಂದು ದಿಕ್ಕೆ
ಬಾನೆಲ್ಲ ತೂತು ತೂತು.
೪
ಬೆಂಕೆಲ್ಲ ಹೂತು
ಮೌನಕ್ಕೆ ಸೋತು
ಮುಗಿದಿತ್ತು ಬೀದಿ-ಮಾತು.

---

ಭಾವ : 'ಸಾವಿತ್ರಿ' ಮಹಾಕಾವ್ಯದ ಭಾವಾನುವಾದ ಮಾಡುವ ಪ್ರಯತ್ನದಲ್ಲಿ ಬಂದ ಅನುಭವ

ಶಬ್ದಾರ್ಥ : ಕಾಳಿ=ಕಪ್ಪು ಬಣ್ಣದವಳು, ಒಂದು ವಾದ್ಯ ವಿಶೇಷ.

# ೫೪ ಹಸುಗೂಸೋ ಇದು!

೧

ಹಸುಗೂಸೋ ಇದು ಹೊಸಗೂಸೋ ಇದು
ಮಾಸಿಲ್ಲ, ಇದ ಮೂಸಿಲ್ಲ.
ಹೊಸ ಬಗೆ ನಸುನಗೆ ಗಾಳಿಯ ದಾಳಿಯು
ಬೀಸಿಲ್ಲ, ಇದ ಕಾಸಿಲ್ಲ.

೨

ಕಳೆ ಮೀರಿದ ಬೆಳೆ, ಅಪರೂಪದ ತೊಳೆ
ಬಿಚ್ಚಿಲ್ಲ, ಇದ ಮುಚ್ಚಿಲ್ಲ.
ಬಾಳ ಕೋಣೆಯೊಳು ಬಿಸಿಲುಕೋಲು ಇದು
ಬಿತ್ತಿಲ್ಲ, ಇದ ಕೆತ್ತಿಲ್ಲ.

೩

ಆವ ತವರೊ ಅನುಭವಿಸಿದವರೆ, ಇದ
ತಿಳಿದಿಲ್ಲ, ಇಳೆಗಿಳಿದಿಲ್ಲ.
ಅಲ್ಲವೆನಲಿ, ಅಹುದೆನಲಿ ಬಿಡಲಿ, ಇದು
ಮಾತಿನ ತೊಡಿಗೆಯ ತೊಟ್ಟಿಲ್ಲ, ಅದ ಬಿಟ್ಟಿಲ್ಲ.

---

ಭಾವ : ಶಿಶುವಿನ ಮುಗ್ಧತೆಯ ವರ್ಣನೆ. ಬಾಲ ಕೃಷ್ಣನೂ ಆಗಬಹುದು.



## ೫೫ ಒಂದು-ಹಲವು

"To be or to become something, to bring something into being is the whole labour of the force of Nature"

-Sri Aurobindo

೧

ಇರುವುದೊಂದೆ ಸೆರೆದು ಮುಂದೆ ಹಲವು ಫಲವ ಪಡೆವುದು.
ಅರಿವುದೊಂದೆ ಬೆರೆತುಕೊಂಡೆ ಹಿಗ್ಗ ಪಡೆದು ನಡೆವುದು.
ಬೀಜದಲ್ಲಿ ಮರಗಳಲ್ಲಿ ಜನನಿಪ್ರಕೃತಿ ಮೆರೆವಳು.
ಅರಿವಿನಲ್ಲಿ ಇರವ ಬೆಳೆಸಿ ಜನಕಪುರುಷ ತೆರೆವನು.

೨

ಮನದ ಗಂಟ ಕಟ್ಟಿಕೊಂಡು
ಬೆನ್ನಮೇಲೆ ಹೊತ್ತುಕೊಂಡು
ಜನುಮವೇಕೆ ಕಳೆವುದು ?
ತತ್ತ್ವ ನೀನು ಬೇರೆ ಏನು ?
ಅದೇ ಆಗಿ ನಾನು ನೀನು
ವಿಶ್ವದಲ್ಲಿ ಮೊಳೆವುದು.

೩

ಓಂ ನಮಃ ಶಿವಾಯ ಎಂದು
ಪ್ರಾಣ-ಲಿಂಗ-ಶಕ್ತಿ ಒಂದು
ಅನುಗ್ರಹವ ತಾಳುವಾ.
ಏಕಾತ್ಮದ ಶರಣರಾಗಿ
ದಿವ್ಯಸೃಷ್ಟಿ ಕರಣರಾಗಿ
ವಿಗ್ರಹದೊಲು ಬಾಳುವಾ.

೪

ಇದೇ ಸಂಧಿ ಇದೇ ಶಾಂತಿ ಮನುಕುರುಕುಲ ಕ್ಷೇತ್ರಕೆ.
ಈ ವಿರಾಟ್ ದೊಡ್ಡ ಆಟ ! ಪಾತ್ರ ಬೇರೆ ನೇತ್ರಕೆ ?
ನಟನಿಗೆ ಜಯ, ನಾಟಕಕ್ಕೆ ಜಯ, ನಾಟಕಕಾರಾ
ಸಾಕ್ಷಿಪುರುಷ ದೃಶ್ಯಗಳಲಿ ನೀ ವಿಶ್ವಾಕಾರಾ.

೫

ಬ್ರಹ್ಮದಲ್ಲಿ ಮಾಯೆಯೆಂದೊ
ಮಾಯೆಯಲ್ಲಿ ಬ್ರಹ್ಮವೆಂದೊ
ಶಬ್ದದಲ್ಲಿ ಮೂಡಿದೆ.
ಶ್ರದ್ಧೆಯಂತೆ  ಬುದ್ಧದೇವ
ದೇವನಂತೆ ಪ್ರಕೃತ ಜೀವ
ಈ ಭಾವ ಹಾಡಿದೆ.

---

ಭಾವ : ಒಂದು ಮತ್ತು ಹಲವು ಎಂಬ ತತ್ತ್ವದ ಹಾಗೂ ಶ್ರದ್ಧೆಯ ಚಿಂತನ.



## ೫೬ ಗಿರಿಶಿಖರ

*"Our right and natural road is towards the Summits".*

**-Sri Aurobindo**

೧

ಅಗೊ ಭೂಮಿಹೃದಯ ಗಿರಿಶಿಖರಗಳಲಿ ಕೈಮೊಗ್ಗ ಮೇಲೆ ಮುಗಿಸಿ,
ಅರ್ಪಿಸುತ್ತಲಿವೆ ಭಕ್ತಿಯನ್ನು ಬಾನಲ್ಲಿ ಸತ್ತ್ವ ಚಿಗಿಸಿ.
ಕೊಳಕುಕೊಳ್ಳದಲಿ ಹುಚ್ಚುಹಳ್ಳದಲಿ ಎಷ್ಟು ದಿವಸ ನಡೆವೆ ?
ಎತ್ತರಕ್ಕೆ ಬಾರಣ್ಣ, ಅಲ್ಲೆ ನೀ ಪಡೆವುದನ್ನು ಪಡೆವೆ.

೨

ತಿರುಮಲೆಯ ಕಡೆಗೆ, ಶ್ರೀಶೈಲದೆಡೆಗೆ ಶೃಂಗೇರಿ ಮಾರ್ಗವಾಗಿ
ಬೆಳಗುಳದ ಬೆಟ್ಟ ಆ ಪೂರ್ವಘಟ್ಟ ಜೀವಕ್ಕೆ ಸ್ವರ್ಗವಾಗಿ
ಎಂದಿನಿಂದಲೋ ಸೆಳೆಯುತಿಹವು ಯಾತ್ರಿಕರ ಮೋದದಿಂದ.
ಬದುಕು ಮಾಡಿಕೊಂಡಿಹುದು ಮನುಜಕುಲ ಆ ಪ್ರಸಾದದಿಂದ.

೩

ಹೊಳೆಗೆ ತಾಯಿಮೊಲೆಯಾಗಿ ಬಾಳುತಿವೆ ಸರ್ವಪರ್ವತಾಗ್ರ ,
ಮನಕೆ ತವರುಮನೆಯಾಗಿ ನೆಲೆಸಿಹವು ತಾನೆ ತಾ ಉದಗ್ರ .
ಹೊಲಕೆ ಮಣ್ಣು ಆ ಮನೆಗೆ ಕಲ್ಲು ತೆರುತಿಹವು ಏನು ಒಲವು !
ಬಿಸಿಲುಗಾಲದಲಿ ನೆರೆಯ ತರುವವೋ ಗಂಗೆಗಳಿಗೆ ಕೆಲವು.

೪

ಗುಡ್ಡದಲ್ಲೆ ಗುಡಿ ಕೊರೆದವರಲ್ಲ ಕಣ್ಗಂಡ ಓಜರೆಲ್ಲ.
ಶಿಲ್ಪವಲ್ಲ ನವಕಲ್ಪ ಸೃಷ್ಟಿ ಆ ಕಲೆಗೆ ಮರಣವಿಲ್ಲ.
ಧ್ಯಾನಲೀನ ಮನ ಏಳೆ ತೊಳೆದು ಅಜ್ಞಾನದಾ ಕಲಂಕ
ಜ್ಯೋತಿ ಜೀವನವೆ ಮೂರ್ತವಾದಂತೆ ಜೀವ ದೇವತಾಂಕ.

೫

ಕಲ್ಲಿನಲ್ಲೆ ದೇವತ್ವ ಮೂಡಿ ಆದರ್ಶವಾಗುತಿರಲು
ಮನುಜನಲ್ಲಿ ಯಾ ರೋಗ ಮೂಡಿ ಜೀವನವೇ ಬೊಕ್ಕುಬೋರಲು
ಆಗುತಿಹುದೊ? ಆ ಬೀಜ ಹುರಿದು ನಿರ್ನಾಮಗೊಳಿಸಲಹುದು.
ಅಲ್ಲಿ ಇಲ್ಲಿ ಒರಗುವದದೇಕೆ, ತುದಿಯಲ್ಲಿ ಫಲವು ಬಹುದು.

- ಹೃದಯ ಸಮುದ್ರ-೫೭/ಪ್ರ : ೧೯೫೬

---

ಭಾವ : ಜ್ಯೋತಿ ಸ್ವರೂಪ ಉನ್ನತ ಜೀವನದ ಅಪೇಕ್ಷೆಯಿಂದ ದೇವತ್ವ ಒಡಮೂಡುವ ಸಾಧ್ಯತೆಯ ಚಿಂತನ.
ಶಬ್ದಾರ್ಥ : ಉದಗ್ರ=ಶ್ರೇಷ್ಠ. ಬೊಕ್ಕುಬೋರಲು-ಬಕ್ಕಬೋರಲು=ಕಾಲುಮೇಲೆ ಕೆಳಗೆ ತಲೆ ಎಂಬ ಸ್ಥಿತಿ, ಬುಡಮೇಲು, ಮುಖ ಕೆಳಗೆ ಬೆನ್ನು ಮೇಲೆ ಮಾಡಿ ದಡಾರನೆ ಬೀಳು.

# ೫೭ ಗೆಳೆಯ ಶಂಕರಗೌಡರಿಗೆ

೧
ಶಿವಾಯನಮ ಓಂ ಶಿವಾಯ ನಮಃ ದಿಮುಡಿ ಮಿಡಿಯುತಿತ್ತು.
ಏಕನಾದವೂ ಶಿವಾಯನಮ ಓಂ ಶ್ರುತಿಯ ಹಿಡಿಯುತಿತ್ತು.
ಶಿವಾಯನಮ ಓಂ ಬಯಲಿನಲ್ಲಿ ಪಡಿನುಡಿಯು ಸಿಡಿಯುತಿತ್ತು.
೨
ತಲೆಯ ಮೇಲೆ ಎಲ್ಲಿಂದೊ ಬಂತೊ ಈ ನಾದ ಗಾಳಿ ಗುದ್ದಿ.
ಗೆಳೆಯ, ನೀವು ಮೈಗರೆದಿರೆಂದು, ಛೀ! ನಂಬಬರದ ಸುದ್ದಿ.
ಎಡದ ಮೈಯ ನಡುಗಿಸುತ ಬಂತು,ಕ್ಷಣ ಮಂಕು ಆಯ್ತು ಬುದ್ಧಿ.
೩
ನನ್ನ ಜೀವನದಿ ನೀವು ತೇಲಿದಿರಿ ಚುಕ್ಕೆ ತೇಲುವಂತೆ.
ಗೆಲುವಿನಲ್ಲಿ ಒಳಸೋತಿರಣ್ಣ ಸವಿಗೆಳಯ ಸೋಲುವಂತೆ.
ಆಪತ್ತಿನಲ್ಲಿ ಸಂಪತ್ತಿನಲ್ಲಿ ನೆರವಾಗಿ ಸಾಲುವಂತೆ.
೪
ನಿಮ್ಮ ಸ್ನೇಹಝರಿ ಏಕತಾನ ಸರ್ವಮೇಳದಂತಭಂಗ.
ದಾಸೋಹ ಶರಣ ಜೀವನದ ರೀತಿ ಕಂಡಿತ್ತು ದೇವಲಿಂಗ.
ನಿಮ್ಮ ಅಭಿರುಚಿಯ ಗಂಧಮೂರ್ತಿ ಪ್ರದ್ಯುಮ್ನನಾದನಂಗ.
೫
ಮೂಡಲದ ಕಡಲ ಗುಡುಗಾಟದೊಡನೆ ಸಂಗಡಿಗನಾಗೆ ಬಂತು.
ಆ ದಿವ್ಯಜೀವನದ ಸವಿಯ ನೋಡಿ ನಂಬಿಗೆಯ ನೆಲಸಿ ನೊಂತು.
ತಂತಂತಿಯಾಗಿ ಸರಿಜೀರು ಹಿಡಿದಿಹುದು ನಿಮ್ಮ ಜೀವತಂತು.
೬
ಒಬ್ಬರಾಗಿ ಬರಲಿಲ್ಲ ನೀವು,ಹಲವೊಬ್ಬರಾಗಿ ಬಂದು
ಏರಿದಿರಿ ಮುಂದೆ,ಸಾರಿದಿರಿ ಹಿಂದೆ,ಸರಿ ಒಕ್ಕಲಾಗಿ ನಿಂದು
ಬೆಳೆಯುವಾಗಲೇ ಮೇಲಿನವರಿಗೂ ಗೊಬ್ಬರಾಗಿ ಎಂದು.
೭
ಒಂಟಿಮುರಿಗೆಯಲಿ ಹಳ್ಳ ಹಿಡಿದು ಹೋಗುತ್ತಲಿತ್ತು ನೀರು
ಕಂಠದಲ್ಲಿ ನೆಲೆಗೊಂಡು ಇತ್ತು ಕನ್ನಡದ ತಾಯಿಬೇರು
ಬಯಲು ಸೀಮೆಯಲಿ ಉರುಳುತಿತ್ತು ಪ್ರಭುದೇವರೊಂದು ತೇರು
೮
ದಾನವಾಗೆ ಮೂಡಿತ್ತು ಜನರ ಅಜ್ಞಾನಕೆದ್ದ ಕ್ಷೋಭ
ನಿಮ್ಮ ಮೌನ ಮನೆಮಾಡಿ ಇತ್ತು ಸಾಹಿತ್ಯ ರಸಿಕ ಶೋಭ
ಕನ್ನಡಕ್ಕೆ ನೀರೆರೆದ ಲೋಭದಲಿ ನಾಡಿಗಾಯ್ತು ಲಾಭ

೯
ನಿಮ್ಮ ಬದುಕು ಕಾಶ್ಮೀರಿ ಶಾಲು, ಅದು ಅಲ್ಲ ತೇಪೆ ಕವುದೆ
ಆದರೇನು ಅನುರಾಗಕಹುದು ವೈರಾಗ್ಯಕೂನು ಹೌದೇ
ತಾಯಿ ಅಪ್ವನೆಂದೊಪ್ಪದವನು ತಂದೆಯನು ಅಪ್ಪಬಹುದೇ ?

೧೦
ಶ್ರಾವಣಕ್ಕೆ ಶ್ರುತಿ ಮೀರಿ ಬಂತೊ, ಹೆಗಲಲ್ಲಿ ಇರಿಸಿ ಕಂಥೆ
ಜೋಗಿ ಎದ್ದಂತೆ ಅಲಕನೆದ್ದು ಮುಗಿಸಿದಿರಿ ಒಂದು ಸಂಥೆ
ಏರು ಜೇರಿನಲಿ ರಾಗ ನಡೆದಿರಲು ತಂತಿ ಹರಿಯುವಂತೆ

೧೧
ಬಾಳಿನಲ್ಲಿ ಕೈಹಿಡಿದು ನಡಿಸಿದಿರಿ ಜೊತೆಯ ಅಣ್ಣಗಳನು
ತಮ್ಮಗಳಿಗೆ ಕಂಡದ್ದ ತೋರಿ ತೆರೆಸಿದಿರಿ ಕಣ್ಣುಗಳನು
ಹೆಣ್ಣುಗರುಳಿನಲಿ ತೂಗಿ ನೋಡಿದಿರಿ ಹೊನ್ನು ಮಣ್ಣುಗಳನು

೧೨
ಭೋಗದಲ್ಲಿ ಜೊತೆಯಾಗಿ ಬೆಳೆದು ರೋಗಕ್ಕು ಮೈಯ ಮಸೆದು
ಯೋಗಕಾಗಿ ಪಾಡಾಗಿ ಬಂದು ಗುರುಪಾದಕಾಗಿ ಒಸೆದು
ಜೊತೆಗೆ ನೋವಿನಲಿ ಜೊತೆಗೆ ಸಾವಿನಲಿ ಆದ ರೀತಿ ಹೊಸದು

೧೩
ಒಕ್ಕಲಿಗರಂತೆ ಒಕ್ಕಲಿಗರಾಗಿ ನೇಗಿಲವೆ ಮುದ್ರೆ ಮಾಡಿ
ನಾಳೆ ಬರುವ ಬೆಳೆಗಾಗಿ ಕಾದ ಹೊಲದಲ್ಲಿ ಜಾಗ ನೋಡಿ
ತಾಯಿ ತಂದೆಗಳ ಪಾದದಲ್ಲಿ ಮುಳುಗಿದಿರಿ ಬರಲು ಮೂಡಿ.

೧೪
ಕಲ್ಲಮಂಟಪದ ನೆರಳಿನಲ್ಲಿ ಮಲಗಿದಿರಿ ಒಂದು ಜಾವು
ಯಜಮಾನರೆಲ್ಲೊ ಆ ಬಲಕೆ ನೀವು ತೋರಿಸಲು ನಿಮ್ಮ ಠಾವು
ಅಮರ ಜೀವನಕೆ ಸಾಕ್ಷಿಯಾಗಿ ಮೂಡಿಹುದು ಅಡಕೆ ಹೂವು

---

ಭಾವ : ಗೆಳೆಯ ಶಂಕರಗೌಡ ಪಾಟೀಲ ಇವರು ಪಾಂಡಿಚೇರಿಯಲ್ಲಿ ದೇಹವಿಟ್ಟರು. ಅವರ ಸ್ನೇಹಸಂಬಂಧದಿಂದ ಉದ್ದೀಪ್ತವಾದ ವಿರಹಗೀತವಿದು. ಇವರೂ ಶ್ರಾವಣದಲ್ಲಿ ದೇಹ ಬಿಟ್ಟರು. ಬೇಂದ್ರೆಯವರು ಶ್ರೀ ಮಾತಾರವಿಂದರ ದರ್ಶನ ಪಡೆಯಲು ಇವರು ಕಾರಣರು.

ಶಬ್ದಾರ್ಥ : ಸರಿಜೇರು=ತಂತಿಯ ಸಮಶ್ರುತಿ. ಸೋಇಹು=ವ್ರತವನ್ನು ಮಾಡಿ. ಒಕ್ಕಲ್=ವಾಸಸ್ಥಳ, ರೈತ, ನಿವಾಸಿ. ಒಂಟಿ ಮುರಿಗಿ=ಏಕಾಂತದ ತಿರುವು, (ಇವರು ಒಂಟಿಮುರಿ ಊರಿನ ದೇಸಾಯರಾಗಿದ್ದರು). ತೇಪೆಕವುದೆ=ಬಣ್ಣ ಬಣ್ಣದ ಬಟ್ಟೆಯ ತುಂಡುಗಳನ್ನು ಜೋಡಿಸಿ ಹೊಲಿದ ಹೊದಿಕೆ, ಹಚ್ಚಡ. ಕಂಥೆ-ಜೋಳಿಗೆ. ಸಂಥೆ=ಪಾರಾಯಣ. ಏರುಜೇರು=ಉತ್ಕಟತೆ; ದಿಮುಡಿ=ಒಂದು ತಂತಿವಾದ್ಯ

# ೫೮ ಆಪ್ಯಾಯನ

೧
ಓ ಲಿಂಗವೆ, ಓ ಅಂಗವೆ, ಓ ಕೂಡಲಸಂಗಾ !
ಓಂ ಆಪ್ಯಾಯನ ಪಡೆಯಲಿ ಈ ಅಂಗಾಂಗಾS.
ನುಡಿ ಉಸಿರೂ ಕಣ್‌ಕಿವಿಯೂ ಒಳಹೊಂದಿಕೆ ವಾಗಿ
ಬಲಗೊಳ್ಳಲಿ ಇಂದ್ರೇಂದ್ರಿಯ ಅದರಿಂದಾಗಿ

೨
ನಾನಾತನು ನೀನಾತನು ತಾನ್ ತನ್ನದು ನೋಡಾ
ಅದು ನಿನ್ನನು; ನೀನದನ್ನು ನಿರಾಕರಿಸಬೇಡಾ !
ಆತನಾಕೆ ಆಕೆಯ ತನು ಒಲಿದೊಲದವ ಬಲ್ಲಾ
ಉಪನಿಷದಿದು ಇದು ಬ್ರಹ್ಮS ಅದು ಇದು ಉದು ಎಲ್ಲಾ

೩
ಒಳಹೊರಗನು ಒಳಗೊಳ್ಳುವ ಒಲವಿನ ಹೃತ್ಪಿಂಡಾ
ಸಮ್ಯಕ್‌ಸ್ಥಿತಿ, ಸಮ್ಯಕ್‌ಗತಿ, ಸಮ್ಯಕ್ ಬ್ರಹ್ಮಾಂಡಾ
ಗುರುಶಿಷ್ಯರ ಸಂವಾದದೊಳಿದೆ ಜೀವದ ಧರ್ಮಾ
ಬ್ರಹ್ಮಭಾವ ನಿರತವಿರಲಿ ನಿಜಜೀವನ ಕರ್ಮಾ.

---

ಭಾವ : ಸಹಭಾವ ಮಂತ್ರದ ಪ್ರತಿಶಬ್ದ ಇಲ್ಲಿದೆ.

ಅರ್ಥ : ಆಪ್ಯಾಯನ=ಸುಖ, ಹಿತ. ಉದು=ನಡುವಿನದು, ಮಧ್ಯದ್ದು.

ವಿಶೇಷ : ಗುರು ಬ್ರಹ್ಮ ಚೈತನ್ಯ ಹಾಗೂ ಶಿಷ್ಯ ಬೇಂದ್ರೆ ಸಂಖ್ಯಾಶಾಸ್ತ್ರ ಮಾಧ್ಯಮದಲ್ಲಿ ನವಮಾನವೀಯತೆಯ ಸಂವಾದ ನಡೆಸುತ್ತಿದ್ದರು. ನಾಮ ಜಪದಂತೆ ಸಂಖ್ಯಾ ಜಪದಿಂದ ಒಳ್ಳೆಯ ಕಾಲಕ್ಕಾಗಿ ಭವಿಷ್ಯ ಸುಖಕ್ಕಾಗಿ ಕವಿ ಜೀವ ತಪಿಸುತ್ತಿತ್ತು.



# ೫೯ ಸಹಸ್ರತಂತ್ರೀ ನಿಃಸ್ವನದಂತೆ



೧
ಸಹಸ್ರತಂತ್ರೀ ನಿಃಸ್ವನದಂತೆ
ಮಾತರಿಶ್ವನಾ ಘನಮನದಂತೆ
ಗುಡುಗಾಡುತ್ತಿದೆ ಗಗನದ ತುಂಬ
ಪ್ರಣವ ಪ್ರವೀಣನ ನಾದಸ್ತಂಭ.

೨
ಏಕದಿಂದಲೇ ಉದಿಸಿದೆ ಸರ್ವ.
ಐಕ್ಯ ಧರಿಸಿಯೇ ಆಳುವನೊರ್ವ.
ಆ ಒರ್ವನೊಳೇ ಸರ್ವವು ಸೇರಿ
ಜಯವನು ಸಾರಲಿ ಧರ್ಮದ ಭೇರಿ

೩
ದದದಾ ದದದೋಂ ದಮದಯ ದತ್ತೋಂ
ದಿಕ್ತಟ ತಟವಟ ಧಿಗಿದಂ ಧಿಕ್ತೋಂ
ನಿರ್ದ್ವಂದ್ವದೊಳೆದ್ದಿತು ಓಂ ನಾದ
ತಾಂಡವೇಶ್ವರನ ಅಖಂಡವಾದ.

೪
ಸತಿಮುಖಿಸುಸ್ಮಿತ ಜನಿತ ಸುವೇದ.
ಶರಣನ ಚಿದ್ಗತಿ ಶರಣ್ಯವೇಧ
ಮಧುರಾಭಕ್ತಿಯ ಮಧುರಾ ಗೀತ
ವೇಣುಧ್ವನಿಯಲಿ ಆತ್ಮಪ್ರೀತ.

೫
ಮಾನವ-ದಾನವ-ದೇವ ದೇವತಾ.
ಯುಗಯುಗ ಗರ್ಭಿತ ಜೀವ ಜೀವಿತಾ
ಮೂರ್ತಿತವಾಗಲಿ ಪ್ರಾರ್ಥನೆಗಾಗಿ
ಉದ್ಭವ ಭವಿಷ್ಯ ಸಾರ್ಥಕವಾಗಿ.

೬
ಸಹಸ್ರಾರವಿಂದೋತ್ಥಿತಬಾಲೆ
ಬ್ರಹ್ಮಹೃದಯರತಿ ಸುಷುಪ್ತ ಜ್ವಾಲೆ
ಏನಿದೆ ? ಏನಿದೆ ? ಏನಾಮೇಲೆ.
ಕೃಪಾಪುಷ್ಪಗಳ ಅನಂತಮಾಲೆ.

೭
ಧರ್ಮಮೇಘವೇ ವರ್ಷಿಸುವಂತೆ
ಸತ್ಯದ ಸತ್ತ್ವವ ಸ್ಪರ್ಷಿಸುವಂತೆ
ಧರಣಿಯ ಕೆಚ್ಚಿಲ ಹರ್ಷಿಸುವಂತೆ
ಬರಲಿದೆ ಮಳೆ ಉದ್ಧರ್ಷಿಸುವಂತೆ-

-ಸಹಸ್ರತಂತ್ರೀ ನಿಃಸ್ವನದಂತೆ.

---

ಭಾವ : ಶ್ರೀ ಅರವಿಂದರ ಆಶೀರ್ವಚನವು ಶ್ರೀ ಮಾತೆಯವರ ಕರುಣಾ ಪ್ರಸಾದದಿಂದ ವಾಸುದೇವ-ಜೀವನದತ್ತ ಗಂಗಾವತರಣದಂತೆ ಇಳಿದುಬರುತ್ತಿದೆ ಎಂಬ ಭೂಕಂಪದ ಆಘಾತ ೨೮ ಫೆಬ್ರುವರಿ ೧೯೫೬ನೆಯ ದಿನ ಬೆಂಗಳೂರತ್ತ ಪ್ರವಾಸ ಮಾಡುವಾಗ ಎಲಹಂಕ ನಿಲ್ದಾಣದ ಬಳಿ ಮೂರ್ತಗೊಂಡು, ಭಾವಗೀತವಾಯಿತು. ಗಾಡಿಯೊಳಗಿನ ಫ್ಯಾನ್‌ನಿಂದ ವೇದಮಂತ್ರ ಕೇಳಿಸುತ್ತಿದ್ದವು. ಬಂಗಾರದ ಹುಡಿ ಧಾರಾಕಾರವಾಗಿ ಸುರಿಯುತ್ತಿರುವ ದರ್ಶನವಾಯಿತು.

ಶಬ್ದಾರ್ಥ : ಮಾತರಿಶ್ವ=ಹಡಗವನ್ನು ತೇಲಿಸುವ ವಾಯು. ಪ್ರಣವ=ಓಂಕಾರ ಮಂತ್ರ. ಸುಷುಪ್ತ=ಗಾಢವಾಗಿ ನಿದ್ರಿಸ್ತ

ವಿಶೇಷ : "Mother India" ೧೯೮೨ರ ಸಂಚಿಕೆಯಲ್ಲಿ ಈ ಕವನದ ಮಹತ್ತ್ವ ಪ್ರಕಟಿಸಲಾಗಿದೆ. ೨೯ ಫೆಬ್ರುವರಿ ೧೯೫೬ರಲ್ಲಿ ನಡೆಯುತ್ತಿದ್ದಾದ Supramental Manifestationಗೆ ಸಂಬಂಧಪಟ್ಟ ಅನುಭಾವವು ಪಾಂಡಿಚೆರಿಯ ಶ್ರೀ ಅರವಿಂದರ ಆಶ್ರಮದ ಹೊರಗಿನ ಇಬ್ಬರು ಸಾಧಕರಿಗೆ ಉಂಟಾಯಿತು. ಅವರಲ್ಲಿ ದ್ರಷ್ಟಾರ ಕವಿ ಬೇಂದ್ರೆ ಒಬ್ಬರು. ಅವರಿಗೆ ಒಂದು ದಿವಸ ಮೊದಲೇ ಸ್ಪಂದನ ತಲುಪಿತು ಎಂಬುದಾಗಿ ಡಾ। ಕೆ. ಡಿ. ಸೆಟ್ನ ಬರೆದಿದ್ದಾರೆ.

## ೬೧ ನಾನಲೆಯುತಿದ್ದೆ

೧

ನಾನಲೆಯುತ್ತಿದ್ದೆನೋ ಬಗೆಯ ಬಾನ ಕೆಂಬೆಳಕು-ನಸುಕಿನಲ್ಲಿ
ಕಿರಿಮರೆವು ನೆನೆವು ಅರೆಬಿರಿತು ತೆರೆದ ಹೊಸಬಾಳ ಮುಸುಕಿನಲ್ಲಿ
ಎದೆಹೂವಿನುಸಿರ ನರುಗಂಪಿನೊಂದು ನಸುಸುಳಿಯು ತೇಲುವಂತೆ
ಒಳಚಿತ್ತವರಳುತಿರೆ ಕಾಯುತಿದ್ದೆ ನಿಶ್ಚಿಂತ ಚಿಂತೆಯಂತೆ.

೨

ಆಃ ನೀನು ಬಂದೆ ತನಿಮಿಂಚಿನುರುಳ ತನ್ನನ್ನೆ ತೂಗುವಂತೆ,
ಕಡುಕಾದ ಮೈಯು ತಡವರಿಸಿ ಮಮತೆ ನಿದ್ದೆಯಲಿ ತಾಗುವಂತೆ,
ಆ ನಮ್ಮ ನಿಮ್ಮ ಒಪ್ಪಂದಮೊಪ್ಪ ಕಣ್ತೆರೆದು ಇಣುಕುವಂತೆ,
ನನ್ನಲ್ಲಿ ಏನೊ ಮಿಸುಗುತ್ತಲಿಹುದು ಬಾನ್ ಮೀನ ಮಿಣುಕುವಂತೆ.

೩

ಮಾತಾಡುವಂತೆ ನಗೆಗಣ್ಣು ತುಳುಕೆ, ನಾನೆಲ್ಲೊ ನೋಡಿದಂತೆ;
ಎನಿಸುವದು; ಚಿತ್ತ ನೆನೆಸುವದು ಎಂದೊ ನೀನೊಮ್ಮೆ ಹಾಡಿದಂತೆ;
ಆ ಪಲ್ಲವಿಯನೆ ಗುಂಗುಣಿಸಿ, ನುಡಿಯನೊಂದೊಂದು ಕಟ್ಟಿದಂತೆ
ಮರವೇರುತಿಹುದು; ಮುದ ಬೀರುತಿಹುದು ಬಾನಟ್ಟ ಮೆಟ್ಟಿದಂತೆ.

೪

ನೀನೆಲ್ಲೆ ಇರಲಿ, ನಾನಿಲ್ಲೆ ಇರಲಿ, ಮೈಗಿರಲಿ ಎಲ್ಲೆಗಿಲ್ಲೆ.
ಆ ಸಾವು ನೋವಿನೊಳತೋಟವೇಕೆ? ಇದ್ದಲ್ಲೆ ಎಲ್ಲವಿಲ್ಲೆ?

---

ಭಾವ: ಶ್ರೀ ಗುರುವಿನ ನೆನಪು ಜನ್ಮಜನ್ಮಾಂತರದ ಸ್ಮೃತಿಯ ಆಳದಲ್ಲಿ ಮಿಸುಕಾಡುವುದೆಂಬ ಸ್ಫುರಣದಿಂದ ಬಂದುದು.

ಶಬ್ದಾರ್ಥ: ಕಡು+ಕಾದ=ಹೆಚ್ಚು+ಕಾವು ಉಳ್ಳದ್ದು. ಮಿಸುಗು=ಹೊಳೆ. ಒಳತೋಟ=ಅಂತಃಕಲಹ, ಹೊಯ್ದಾಟ.



# ಡಾ॥ ದ. ರಾ. ಬೇಂದ್ರೆಯವರ ಜೀವನ ಕಥೆಯ ಹಂದರ

## ಜನನ-ವಿವಾಹ

೩೧-೧-೧೮೯೬ : ಮಾಘವದ್ಯ ಪ್ರತಿಪದಾ-ಗುರುಪ್ರತಿಪದಾ, ಮನ್ಮಥನಾಮ ಸಂವತ್ಸರ-ಧಾರವಾಡ, ಪೋತನೀಸ ಓಣಿಯಲ್ಲಿ ಜನನ.

೧೮೯೯ : ನೀರಕುತ್ತು ದಾಟಿತು. ಜೇಷ್ಠವೋ ಶ್ರಾವಣವೊ ಇರಬೇಕು. ಹಾಲಗೇರಿ ಕೆರೆಯಲ್ಲಿ ಬಿದ್ದು ಜೀವಂತ ಪಾರಾದದ್ದು.

೧೯೦೭ : ತಂದೆ-ರಾಮಚಂದ್ರ ತೀರಿಕೊಂಡರು.

೧೯೦೨-೧೯೧೩ : ಧಾರವಾಡದಲ್ಲಿ ಪ್ರಾಥಮಿಕ ಶಿಕ್ಷಣದಿಂದ ಮ್ಯಾಟ್ರಿಕ್ ಪಾಸಾಗುವವರೆಗೆ.

೧೯೧೩ : ಅಜ್ಜಿ-ತಾಯಿಯ ತಾಯಿ. ಗೋದುಬಾಯಿ ತೀರಿಕೊಂಡರು,

೧೯೧೪ : ಪುಣೆಯ ಫರ್ಗ್ಯುಸನ್ ಕಾಲೇಜು ಸೇರಿದ್ದು.

೧೯೧೬-೧೭ : ವಿವಿಧ ಛಂದಸ್ಸುಗಳಲ್ಲಿ, ಕನ್ನಡ, ಮರಾಠಿ, ಇಂಗ್ಲೀಷ್ ಹಾಗೂ ಸಂಸ್ಕೃತದಲ್ಲಿ ಕವಿತಾ ರಚನೆ ಹಾಗೂ ಶ್ರೇಷ್ಠ ಕವಿಗಳ ಕವನಗಳ ಅನುವಾದ.

೧೯೧೮ : ಬಿ. ಎ. ಪದವಿ. ಜೂನ್ ೪ರಂದು. ಧಾರವಾಡದ ವಿಕ್ಟೋರಿಯಾ ಹೈಸ್ಕೂಲಿನಲ್ಲಿ ಶಿಕ್ಷಕ. (ಈಗಿನ ವಿದ್ಯಾರಣ್ಯ ಹೈಸ್ಕೂಲು)

೧೯೧೯ : ಲಕ್ಷ್ಮೀಬಾಯಿ ಅವರೊಂದಿಗೆ ಹುಬ್ಬಳ್ಳಿಯಲ್ಲಿ ವಿವಾಹ. 'ವಾಗ್ಭೂಷಣ' ಸಂಪಾದಕ ವರ್ಗದಲ್ಲಿ ಸೇರ್ಪಡೆ.

## ಸಂತತಿ

೧. : ಕ್ಷೇಮೇಂದ್ರ (ಜನನ : ೧೯೨೨ ಧಾರವಾಡ; ಮರಣ ; ೧೯೨೩)
'ಮೊದಲಿನ ಫಲವೊಂದು ಮೀಸಲು ಮಣ್ಣಿಗೆ.'

೨. : ರಾಮ (ಜನನ ೧೯೨೪ ಹಾನಗಲ್ಲ : ಮರಣ ೧೯೪೪)
'ಹುಸಿನಗುವ ಕೂಸಿನ ಹೊಸ ಹೊಸ ಆಟಿಕೆ.'

೩. : ಭಾಸ್ಕರ (ಜನನ ೧೯೨೭ ಧಾರವಾಡ ; ಮರಣ ೧೯೨೭)
'ಭೆಟ್ಟಿಗೆ ಬಂದನು ಹೊಸದೊಬ್ಬ ಕಂದನು ಅಥಿತಿಯೋ ಎಂಬಂತೆ.'

೪. : ಪಾಂಡುರಂಗ (ಜನನ:೧೯೨೮. ಧಾರವಾಡ ಮರಣ : ೧೮-೧೧-೨೦೦೩)
'ಹುಡುಗನ ಒಡನಾಟವು ಹುಡುಗಾಟ ಮಾಡಿದವು.'

೫. : ಲಲಿತಾ (೧೯೩೪, ಧಾರವಾಡ; ಮರಣ ೧೯೩೪)
'ಆ ಕೂಸ ಕಳಕೊಂಡು ನೀನೆಂತೊ ಉಳಕೊಂಡು
ಲಾಲಿತ್ಯವಿಲ್ಲದ ಶೈಲಿಯೊಲು.'
('ನೀ ಹಿಂಗ ನೋಡಬ್ಯಾಡ ನನ್ನ' ಕವನದ ವಸ್ತು)

೬. : ವಾಮನ (ಜನನ : ೧೯೩೫, ರಾಣೆಬೆನ್ನೂರು)

೭. : ಪ್ರೇಮಾ (ಜನನ : ೧೯೩೭, ಧಾರವಾಡ; ಮರಣ : ೧೯೩೭)

೮. : ಮಂಗಲಾ (ಜನನ : ೧೯೩೯, ಧಾರವಾಡ)

೯. : ಆನಂದ (ಜನನ : ೧೯೪೩, ಧಾರವಾಡ; ಮರಣ : ೧೯೪೪)

## ಇತರ

೧೯೨೨ : ದಾವಣಗೇರಿಗೆ ಸಾಹಿತ್ಯ ಸಮ್ಮೇಲನಕ್ಕೆ ಹೋದದ್ದು.
೧೯೨೨ : ''ಕೃಷ್ಣಾಕುಮಾರಿ'' ಮೊದಲನೆಯ ಆವೃತ್ತಿ ಪ್ರಕಟವಾದದ್ದು.
೧೯೨೩ : ವಿಜಾಪೂರದ ಸಾಹಿತ್ಯ ಸಮ್ಮೇಲನಕ್ಕೆ ಹೋದದ್ದು.
'ಜಯ ಕರ್ನಾಟಕ' ಪತ್ರಿಕೆಯೊಂದಿಗೆ ಸಂಬಂಧ, ಮಧುರಚೆನ್ನರ ಭೆಟ್ಟಿ.
೧೯೨೪ : ತಾಯಿ-ಪಾರ್ವತಿ-ಅಂಬಿಕೆ ತೀರಿಕೊಂಡದ್ದು.
'ತಾಯಿ ಗಿಡವು ಮಾಯವಾಯಿತಲೇ!'
- 'ಜೇನುಹುಟ್ಟು' ಕೈ ಬರಹ ಪತ್ರಿಕೆ ಎಳೆಗೆಳೆಯರಾದ ವಿದ್ಯಾರ್ಥಿಗಳ ಮೂಲಕ ಹೊರಡಿಸಿದ್ದು.
೧೯೨೬ : 'ಸ್ವಧರ್ಮ' ಪತ್ರಿಕೆಯ ಸಂಪಾದಕರು.
- ಗೆಳೆಯರ ಗುಂಪಿನಿಂದ ನಾಡ ಹಬ್ಬ ಪ್ರಾರಂಭ.
೧೯೨೮ : 'ನನ್ನದು ಈ ಕನ್ನಡ ನಾಡು' ಕವನ ಸಂಗ್ರಹದ ಸಂಪಾದಕರು.
೧೯೨೯ : I) ಕಕ್ಕ ಬಂಡೋಪಂತ ಬೇಂದ್ರೆಯವರು ದ. ರಾ. ಬೇಂದ್ರೆಯವರಿಗೆ ೪-೧೧-೧೯೨೯ ರಂದು ವಾಸಕ್ಕಾಗಿ ಸಾಧನಕೇರಿಯಲ್ಲಿ ಒಂದು ಮನೆಯನ್ನು ಕಾಣಿಕೆಯಾಗಿ ಕೊಡಿಸಿದ್ದು.
೧೩, ಶ್ರೀಮಾತಾ, ಸಾಧನಕೇರಿ, ಧಾರವಾಡ - ನಿವಾಸ.
'ಮಲೆನಾಡ ಸೆರಗಿನ ನೆರೆಗಿದ್ದ ಮನೆಯೊಂದು ಮಮತೆಯ
ಕುರುಹಾಗಿ ತಾ ದೊರಕಿತು.'
II) ಬೆಳಗಾವಿಯ ಸಮ್ಮೇಳನದಲ್ಲಿ -
'ಹಕ್ಕಿ ಹಾರುತಿದೆ ನೋಡಿದಿರಾ' ಕವನ ವಾಚನ.
III) ೧೧-೧೧-೧೯೨೯ ರಂದು ಶ್ರೀ ಆಲೂರ್ ವೆಂಕಟರಾವ್ ಇವರಿಂದ 'ಜಯ ಕರ್ನಾಟಕ' ಕೊಂಡದ್ದು.
ಸಂಪಾದಕರಾಗಿ ಕಾರ್ಯ ನಿರ್ವಹಣೆ.
''ಜಯ ಕರ್ನಾಟಕವೆನ್ನುತ ಗೆಳೆಯರ ಕನ್ನಡದಾಸೆಯು ಗುಡಿಕಟ್ಟಿತು.''
'ನರಬಲಿ' - ಕವನವು ಬಲಿಮಾಡಿತೆನ್ನನು,
ಹೇಳವನಿದ್ದಲ್ಲಿಗೆ ಹೊಳೆ ಬಂದಿತು.''
೧೯೩೦ : 'ಹಕ್ಕಿ ಹಾರುತಿದೆ' ಕವನ ಸಂಗ್ರಹದ ಸಂಪಾದಕರು.
೧೯೩೨ : ಹಿಂಡಲಗಿ ಜೇಲುವಾಸ. ಮುಗದ ಎಂಬ ಹಳ್ಳಿಯಲ್ಲಿ ದಿಗ್‌ಬಂಧನವಾಸ.
''ಪ್ರಾಣದ ಒಗರಷ್ಟು ಹಿಂಡಿತು ಹಿಂಡಲಗಿ,
ಮುಗದದ ಮಳೆಗಾಗಿ ಮುಂದೆಳೆದಿತು.''
೧೯೩೨ : ''ಗರಿ'' ಮೊದಲನೆಯ ಆವೃತ್ತಿಯು ಹೊರ ಬಂದದ್ದು.
೧೪-೫-೧೯೩೩ : 'ಜಯ ಕರ್ನಾಟಕ' ಸಂಬಂಧ ಮುಕ್ತಾಯ.
ಗೆಳೆಯರ ಗುಂಪಿನ ಸ್ಫೋಟ, ವಿಘಟನೆ.
೧೯೩೩ : ಎಂ. ಎ. ಅಭ್ಯಾಸಕ್ಕಾಗಿ ಪುಣೆಗೆ ಪ್ರಯಾಣ.
'ಪುಣೆಯಲ್ಲಿ ಕಳೆದಂಥ ಅಜ್ಞಾತವಾಸವ ನೆನೆದರೆ ಮೈಯೆಲ್ಲ ಜುಮ್ಮೆನ್ನುತ್ತ'

| | |
|---|---|
| ೧೯೩೪ | : ''ಮೂರ್ತಿ'' ಮೊದಲನೆಯ ಆವೃತ್ತಿ ಪ್ರಕಟವಾದದ್ದು. |
| ೧೯೩೪ | : ''ಕಾಮಕಸ್ತೂರಿ'' ಮೊದಲನೆಯ ಆವೃತ್ತಿ ಪ್ರಕಟವಾದದ್ದು. |
| ೧೯೩೫ | : ಎಂ. ಎ. ಪದವಿ ಪಡೆದದ್ದು<br>ಮುಂಬೈಯಲ್ಲಿ ಸಾಹಿತ್ಯ ಸಮ್ಮೇಳನದ ಕವಿ ಸಮ್ಮೇಳನಕ್ಕೆ ಅಧ್ಯಕ್ಷ. |
| ೧೯೩೫-೪೦ | : ಡಾ|| ಮಾಸ್ತಿಯವರ ಸಹಾಯ ಹಸ್ತ ಲಭಿಸಿದ್ದು.<br>''ದೈವದ ಕೃಪೆಯೆಂದು ಅದ ತಿಳಿದೆನು.'' |
| ೧೯೩೬ | : ವಿಜಯನಗರ ಷಟ್ ಶತಸಾಂವತ್ಸರಿಕ ಉತ್ಸವದ ಕೆಲಸಕ್ಕಾಗಿ<br>ಹೈದರಾಬಾದ ಪ್ರವಾಸ. |
| ೧೯೩೭ | : 'ಸಖೀಗೀತ'ದ ಮೊದಲನೆಯ ಆವೃತಿ ಪ್ರಕಟಗೊಂಡದ್ದು. |
| ೧೯೩೮ | : ನಾದಲೀಲೆ, ಉಯ್ಯಾಲೆ, ಪ್ರಕಟಗೊಂಡದ್ದು<br>''ಜೀವನ'' ಪತ್ರಿಕೆಯ ಸಂಪಾದಕ ಆದದ್ದು. |
| ೧೯೩೯ | : ''ನಿರಾಭರಣ ಸುಂದರಿ,'' ಹಾಗೂ ''ಸಾಹಿತ್ಯ ಮತ್ತು ಸಂಶೋಧನೆ,''<br>ಕೃತಿಗಳು ಪ್ರಕಟಗೊಂಡದ್ದು. |
| ೧೯೪೦ | : ಧಾರವಾಡದಲ್ಲಿ ಸಾಹಿತ್ಯ ಸಮ್ಮೇಳನ. |
| ೧೯೪೧ | : ಗದಗ-ವಿದ್ಯಾದಾನ ಸಮಿತಿ ಹೈಸ್ಕೂಲಿಗೆ-ಹೆಡ್ ಮಾಸ್ತರ ಆಗಿ ಹೋದದ್ದು. |
| ೧೯೪೨ | : ಹುಬ್ಬಳ್ಳಿಯ ನ್ಯೂ ಇಂಗ್ಲೀಷ್ ಸ್ಕೂಲಿಗೆ ಶಿಕ್ಷಕ. |
| ೧೯೪೩ | : ಫೆಬ್ರುವರಿಯಲ್ಲಿ ಪಾಂಡಿಚೇರಿ-ಶ್ರೀಮಾತಾರವಿಂದರ ದರ್ಶನ.<br>- ಪೂನಾ ಬಿ. ಎಂ. ಸಿ. ಸಿ. ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕ,<br>''ಮೇಘದೂತ'' ಪ್ರಕಟಗೊಂಡದ್ದು. |
| ೧೯೪೪ | : ಸೊಲ್ಲಾಪುರದ ಡಿ. ಏ. ವ್ಹಿ. ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕ ಆದದ್ದು. |
| ೧೯೪೪ | : ರಾಮ ಹಾಗೂ ಆನಂದ ತೀರಿಕೊಂಡದ್ದು ಸೊಲ್ಲಾಪುರದಲ್ಲಿ. |
| ೧೯೪೫ | : ಸೊಲ್ಲಾಪುರ ನೀಲಾನಗರದಲ್ಲಿ ವಾಸ ಪ್ರಾರಂಭ. |
| ೧೯೪೬ | : ಗೆಳೆಯರಿಂದ ಸನ್ಮಾನ. ೫೦ನೆಯ ಹುಟ್ಟುಹಬ್ಬ<br>''ಹಾಡು-ಪಾಡು'' ಪ್ರಕಟಗೊಂಡದ್ದು. |
| ೧೯೪೭ | : ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ್ದು. |
| ೧೯೪೮ | : ಗಾಂಧೀ ಮರಣ, ಜೆ.ಕೃಷ್ಣಮೂರ್ತಿ ಮತ್ತು<br>ಶ್ರೀ ಗುಳವಣಿ ಮಹಾರಾಜರ ದರ್ಶನ. |
| ೧೯೫೦ | : ಶ್ರೀಅರವಿಂದರ ನಿರ್ವಾಣ; ಡಿಶೆಂಬರ-೫. ಹೆಂಡತಿಗೆ ವಿಷಮ ಜ್ವರ. |
| ೧೯೫೧ | : ''ಗಂಗಾವತರಣ'' ಪ್ರಕಟಗೊಂಡದ್ದು. ಸಂಖ್ಯಾಯೋಗ ವಿಚಾರ,<br>ಮರಾಠಿಯಲ್ಲಿ ವಿಪುಲವಾಗಿ ಬರವಣಿಗೆ. |
| ೧೯೫೨ | : ಪ್ರಭಾಕರ ಮಹಾರಾಜರ ದರ್ಶನ. |
| ೧೯೫೩ | : ಗೆಳೆಯ ಚೆನ್ನಮಲ್ಲಪ್ಪ-ಮಧುರಚೆನ್ನ-೧೫ ಅಗಸ್ಟರಂದು ಮರಣ. |
| ೧೯೫೪ | : ಶ್ರೀರಾಮದಾಸರ ದರ್ಶನ. |
| ೧೯೫೫ | : ದಿಲ್ಲಿಗೆ ಕವಿ ಸಮ್ಮೇಳನಕ್ಕಾಗಿ ಹೋದದ್ದು. |

೧೯೫೬ : ೬೦ನೇ ಹುಟ್ಟುಹಬ್ಬ. ಧಾರವಾಡ ಆಕಾಶವಾಣಿ ಸಾಹಿತ್ಯ ಸಲಹಾಕಾರ,
ಮಗ-ಪಾಂಡುರಂಗನ ವಿವಾಹ,
ಡಾ|| ಕುವೆಂಪು ಅವರಿಗೆ ಸಾಹಿತ್ಯ ಅಕಾಡೆಮಿ ಬಹುಮಾನ.

೧೯೫೭ : ''ಅರಳು-ಮರಳು'' ಪ್ರಕಟಗೊಂಡದ್ದು
ಡಾ|| ರಂ. ಶ್ರೀಮುಗಳಿ ಯವರಿಗೆ ಸಾಹಿತ್ಯ ಅಕಾಡೆಮಿ ಬಹುಮಾನ.

೧೯೫೮ : ಸಾಹಿತ್ಯ ಅಕಾಡೆಮಿ ಬಹುಮಾನ ಯಾರಿಗೂ ಸಿಗಲಿಲ್ಲ.

೧೯೫೮-೫೯ : ''ಅರಳು-ಮರಳು'' ಸಂಗ್ರಹಕ್ಕೆ ಸಾಹಿತ್ಯ ಅಕಾಡೆಮಿ ಬಹುಮಾನ,
ಧರ್ಮಸ್ಥಳಕ್ಕೆ ಹೋದದ್ದು. 'ನಮನ', 'ಸಂಚಯ' ಪ್ರಕಟಗೊಂಡದ್ದು.

೧೯೬೦ : ಡಾ|| ಕಾರಂತರಿಗೆ ಬಹುಮಾನ.

೧೯೬೧ : ಡಾ|| ಗೋಕಾಕರಿಗೆ ಬಹುಮಾನ.

---

(ಇಲ್ಲಿಯವರೆಗಿನ ಜೀವನ ಘಟನಾವಳಿಗಳನ್ನು ದ.ರಾ.ಬೇಂದ್ರೆಯವರು ತಮ್ಮ ಆತ್ಮಚರಿತ್ರೆಗೆ ಅನುಬಂಧವಾಗಿ ಪ್ರಕಟಿಸಿದ್ದು ''ನಡೆದು ಬಂದ ದಾರಿ'' ಸಂ.೩ರಲ್ಲಿ. ಇದಕ್ಕೆ ಐತಿಹಾಸಿಕ ಮಹತ್ವವಿದೆ. ತಮ್ಮ ಸ್ನೇಹಿತರಿಗೆ ಸಿಕ್ಕ ಬಹುಮಾನ ಅಥವಾ ಅವರ ಜೀವನ ಘಟನೆಗಳು ತಮ್ಮ ಜೀವನದ ಪ್ರಮುಖ ಘಟನೆ ಎಂಬುದಾಗಿ ಬೇಂದ್ರೆ ಭಾವಿಸಿದ್ದು ಅನುಕರಣೀಯ. ಸಾಹಿತಿ-ಸಾಹಿತಿ-ಸ್ನೇಹ ಸಂಬಂಧವೇ ಸಂಸ್ಕೃತಿ.)

---

೧೯೬೨ : ತುಮಕೂರಿನ ಪೌರಸಭೆಯ ಸನ್ಮಾನ.

೧೯೬೪ : ಮೈಸೂರು ದಸರಾ ಮಹೋತ್ಸವ ಸನ್ಮಾನ.

೧೯೬೫ : ಮರಾಠಿ ''ಸಂವಾದ'' ಕೃತಿಗೆ ಕೇಳಕರ ಪ್ರಶಸ್ತಿ.

೧೯೬೬ : ಮೈಸೂರು ವಿಶ್ವವಿದ್ಯಾಲಯದಿಂದ ''ಗೌರವ ಡಾಕ್ಟರೇಟ್,''
ಹೈದ್ರಾಬಾದಿನ ಹಿಂದೀ ಪ್ರಚಾರ ಸಭಾದ 'ಸಾಹಿತ್ಯ ಆಚಾರ್ಯ' ಪ್ರಶಸ್ತಿ
ಶಿರಹಟ್ಟಿಯಲ್ಲಿ ೭೦ನೇ ಹುಟ್ಟುಹಬ್ಬ
ಮೈಸೂರು ಸರ್ಕಾರದ (ಕರ್ನಾಟಕ) ಆಜನ್ಮ ವಿಶ್ರಾಂತಿ ವೇತನ.
ಪತ್ನಿ ಶ್ರೀಮತಿ ಲಕ್ಷ್ಮೀಬಾಯಿಯವರ ನಿಧನ: ೧೭-೮-೧೯೬೬.

೧೯೬೮ : ದಿಲ್ಲಿಯಿಂದ 'ಪದ್ಮಶ್ರೀ' ಪ್ರಶಸ್ತಿ.
ಕರ್ನಾಟಕ ವಿಶ್ವವಿದ್ಯಾಲಯದಿಂದ ''ಗೌರವ ಡಾಕ್ಟರೇಟ್.''

೧೯೬೯ : ಕೇಂದ್ರ ಸಾಹಿತ್ಯ ಅಕಾಡೆಮಿಯ 'ಫೆಲೊಶಿಪ್'ಗೌರವ-ದಿಲ್ಲಿ.

೧೯೭೨ : ಪರ್ಯಾಯದಲ್ಲಿ ಉಡುಪಿ ಮಠದ ವತಿಯಿಂದ
'ಕರ್ನಾಟಕ ಕವಿ ಕುಲ ತಿಲಕ' ಬಿರುದು. ೭೫ನೇ ಹುಟ್ಟು ಹಬ್ಬದ
ಸವಿನೆನಪಿಗಾಗಿ ವರಕವಿ ಬೇಂದ್ರೆಯವರನ್ನು ಕುರಿತು ರಾಜ್ಯ ಸರ್ಕಾರದ
ಸಾಕ್ಷಿ ಚಿತ್ರ ನಿರ್ಮಾಣ.

೧೯೭೩-೭೪ : 'ನಾಕುತಂತಿ' ಕವನ ಸಂಗ್ರಹಕ್ಕೆ ಜ್ಞಾನಪೀಠ ಪ್ರಶಸ್ತಿ ಪ್ರದಾನ.

೧೯೭೬ : ವಾರಣಾಸಿ ಕಾಶೀ ವಿದ್ಯಾಪೀಠದಿಂದ ''ಗೌರವ ಡಾಕ್ಟರೇಟ್''

೨೬-೧೦-೮೧ : ನಿರ್ವಾಣ - ಮುಂಬೈಯ ಹರಿಕಿಸನ್‌ದಾಸ ಆಸ್ಪತ್ರೆಯಲ್ಲಿ.
''ನಾವು ಬರತೇವಿನ್ನ ನೆನಪಿರಲಿ ತಾಯಿ, ನಂ ನಮಸ್ಕಾರ ನಿಮಗ''



# ಡಾ.ದ.ರಾ.ಬೇಂದ್ರೆಯವರ ಸಾಹಿತ್ಯ ಕೊಡುಗೆ

## ಕವನ ಸಂಗ್ರಹಗಳು-'ಅರಳು ಮರಳು' ಪೂರ್ವದಲ್ಲಿ - ೧೦

೧. ಕೃಷ್ಣಕುಮಾರಿ
೨. ಗರಿ
೩. ಸಖೀಗೀತ
೪. ಮೂರ್ತಿ
೫. ಕಾಮಕಸ್ತೂರಿ
೬. ಉಯ್ಯಾಲೆ
೭. ನಾದಲೀಲೆ
೮. ಕನ್ನಡ ಮೇಘದೂತ
೯. ಹಾಡು-ಪಾಡು
೧೦. ಗಂಗಾವತರಣ

## ಕವನ ಸಂಗ್ರಹಗಳು-'ಅರಳು ಮರಳು' ಅನಂತರದಲ್ಲಿ - ೧೭

೧೧. ಸೂರ್ಯಪಾನ
೧೨. ಹೃದಯ ಸಮುದ್ರ
೧೩. ಮುಕ್ತಕಂಠ
೧೪. ಚೈತ್ಯಾಲಯ
೧೫. ಜೀವಲಹರಿ
೧೬. ಅರಳು ಮರಳು*
೧೭. ನಮನ
೧೮. ಸಂಚಯ
೧೯. ಉತ್ತರಾಯಣ
೨೦. ಮುಗಿಲ ಮಲ್ಲಿಗೆ
೨೧. ಯಕ್ಷಯಕ್ಷಿ
೨೨. ನಾಕುತಂತಿ**
೨೩. ಮರ್ಯಾದೆ
೨೪. ಶ್ರೀಮಾತಾ
೨೫. ಇದು ನಭೋವಾಣಿ
೨೬. ಮತ್ತೆ ಶ್ರಾವಣಾ ಬಂತು
೨೭. ಚತುರೋಕ್ತಿ ಮತ್ತು ಇತರ ಕವನಗಳು.

*ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, **ಜ್ಞಾನಪೀಠ ಪ್ರಶಸ್ತಿ.

## ಮರಣೋತ್ತರ ಕವನ ಸಂಕಲನಗಳು - ೬

೨೮. ಪರಾಕಿ
೨೯. ಕಾವ್ಯವೈಖರಿ
೩೦. ತಾ ಲೆಕ್ಕಣಿಕಿ ತಾ ದೌತಿ
೩೧. ಬಾಲಬೋಧೆ
೩೨. ಪ್ರತಿಬಿಂಬಗಳು
೩೩. ಶತಮಾನ

## ಆಯ್ದ ಕವನ ಸಂಕಲನಗಳು - ೯

೩೪. ಬಾ ಹತ್ತರ
೩೫. ವಿನಯ
೩೬. ಒಲವೆ ನಮ್ಮ ಬದುಕು
೩೭. ಚೈತನ್ಯದ ಪೂಜೆ
೩೮. ಶ್ರಾವಣ ಪ್ರತಿಭೆ
೩೯. ಕುಣಿಯೋಣು ಬಾ
೪೦. ಸಮರಸವೇ ಜೀವನ
೪೧. ನಾಳಿನಾ ಕನಸು
೪೨. ನೂರು ಮರ ನೂರು ಸ್ವರ ಒಂದೊಂದು ಅತಿ ಮಧುರ.

## ದ. ರಾ. ಬೇಂದ್ರೆ ಜೀವನ ಮಹಾಕಾವ್ಯ : ಅಂಬಿಕಾತನಯದತ್ತರ ಸಮಗ್ರ ಕಾವ್ಯ : ''ಔದುಂಬರಗಾಥೆ''

(ವರಕವಿ ಡಾ॥ದ.ರಾ.ಬೇಂದ್ರೆ ಸಂಶೋಧನ ಸಂಸ್ಥೆಯ ಪ್ರಕಟಣೆಗಳು ೮ ಸಂಪುಟಗಳು)

೪೩. ನಮನ ಸಂಪುಟ
೪೪. ದರ್ಶನ ಸಂಪುಟ
೪೫. ವಿಕಾಸ ಸಂಪುಟ
೪೬. ವಿನ್ಯಾಸ ಸಂಪುಟ
೪೭. ತತ್ತ್ವ ಸಂಪುಟ
೪೮. ಸಿದ್ಧಾಂತ ಸಂಪುಟ
೪೯. ಶ್ರೀಮಾತಾರವಿಂದ ಪ್ರಜ್ಞಾಪ್ರಕಾಶ
೫೦. ಸಮಗ್ರ ಸಖೀಗೀತ

## ವರಕವಿ ದ. ರಾ. ಬೇಂದ್ರೆ ಸಂಗೀತ ಅಕಾಡಮಿ ಪ್ರಕಟಣೆಗಳು-೧೦

ಹಿಂದುಸ್ತಾನಿ ಶಾಸ್ತ್ರೀಯ ಸಂಗೀತ ಸಂಯೋಜನೆಗಳೊಂದಿಗೆ ಬೇಂದ್ರೆ ಗೇಯ ಗೀತಗಳ ಸಂಗ್ರಹಗಳು.

೫೧. ಅಂಬಿಕಾತನಯನ ಹಾಡS ಬೆಳದಿಂಗಳ ನೋಡS
೫೨. ನೋಡ್ಯಾನS ದಶಾವತಾರ ಅಂಬಿಕಾತನಯ ಹಾಡ್ಯಾನS
೫೩. ಅಂಬಿಕಾತನಯದತ್ತ ಬೇಂದ್ರೆ ಕಂಡ ಬೆನಕ
೫೪. ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರಾವಣ
೫೫. ಅಂಬಿಕಾತನಯದತ್ತ ಬೇಂದ್ರೆ ಕಂಡ ಋತು ದರ್ಶನ
೫೬. ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರೀಮಾತಾರವಿಂದರು
೫೭. ಅಂಬಿಕಾತನಯದತ್ತ ಬೇಂದ್ರೆ ಕಂಡ ನಾಳಿನಾ ನಾಳಿನಾ ಕನಸು
೫೮. ಅಂಬಿಕಾತನಯದತ್ತ ಬೇಂದ್ರೆ ಕಂಡ ಭಾವ ರಾಗ ಮಂಜರಿ
೫೯. ಅಂಬಿಕಾತನಯದತ್ತ ಬೇಂದ್ರೆ ಕಂಡ ನಾದ ನವನೀತ
೬೦. ಬೇಂದ್ರೆ ಸಂಗೀತ-ಸಿದ್ಧಾಂತ ಪ್ರಯೋಗ.

## ನಾಟಕಗಳು - ೧೪

೬೧. ದೆವ್ವನ ಮನೆ
೬೨. ಹಳೆಯ ಗೆಳೆಯರು
೬೩. ಸಾಯೋ ಆಟ
೬೪. ತಿರುಕರ ಪಿಡುಗು
೬೫. ಗೋಲ್
೬೬. ಉದ್ಧಾರ
೬೭. ನಗೆಯ ಹೊಗೆ
೬೮. ಮಂದೀ ಮದಿವಿ
೬೯. ಮಂದೀ ಮಕ್ಕಳು
೭೦. ಮಂದೀ ಮನಿ
೭೧. ಆ ಥರಾ ಈ ಥರಾ
೭೨. ಶೋಭನಾ
೭೩. ಜಾತ್ರೆ
೭೪. ಮಕ್ಕಳು ಅಡಗಿ ಮನೆ ಹೊಕ್ಕರೆ

## ಬೇಂದ್ರೆ ಮಾನಸ ನಾಟಕಗಳು - ೨

೭೫. ಮಿಸ್ ಫಾರ್ಚ್ಯುನ್ - ಪ್ರೊ॥ ಕೆ. ಎಸ್. ಶರ್ಮಾ ವಿರಚಿತ
೭೬. ಕರೆ ಹೆಂಡತಿ ಆದರ ಖರೆ ಹೆಂಡತಿ - ಪ್ರೊ॥ ಎನ್. ಕೆ. ಕುಲಕರ್ಣಿ ವಿರಚಿತ

## ಹರಟೆ, ನಗೆ, ಕಥೆ - ೨

೭೭. ನಿರಾಭರಣ ಸುಂದರಿ
೭೮. ಚೀನದ ಬಾಳು ಬದುಕು (ಅನುವಾದಿತ ಕಥಾ ಸಂಕಲನ)

## ವಿಮರ್ಶೆ - ೧೧

೭೯. ಸಾಹಿತ್ಯ ಮತ್ತು ವಿಮರ್ಶೆ
೮೦. ಸಾಹಿತ್ಯ ಸಂಶೋಧನೆ
೮೧. ವಿಚಾರ ಮಂಜರಿ
೮೨. ಕವಿ ಲಕ್ಷ್ಮೀಶನ ಜೈಮಿನಿ ಭಾರತಕ್ಕೆ ಮುನ್ನುಡಿ
೮೩. ಮಹಾರಾಷ್ಟ್ರ ಸಾಹಿತ್ಯ
೮೪. ಕಾವ್ಯೋದ್ಯೋಗ
೮೫. ಕುಮಾರವ್ಯಾಸ (ಪುಸ್ತಿಕೆ)
೮೬. ಸಾಹಿತ್ಯದ ವಿರಾಟ್ ಸ್ವರೂಪ,
೮೭. ಕನ್ನಡ ಸಾಹಿತ್ಯದಲ್ಲಿ ನಾಲ್ಕು ನಾಯಕ ರತ್ನಗಳು
೮೮. ಸಾಹಿತ್ಯ ಯೋಗ (ಆಯ್ದು ವಿಮರ್ಶ ಲೇಖನ ಸಂಗ್ರಹ)
೮೯. ಶ್ರೀ ಅರವಿಂದ ಯೋಗ, ಆಶ್ರಮ ಮತ್ತು ತತ್ತ್ವೋಪದೇಶ.
(ಶ್ರೀ ಅರವಿಂದರನ್ನು ಕುರಿತು ಪರಿಚಯ ಪುಸ್ತಿಕೆ)

## ಸಂಪಾದನೆ - ೬

೯೦. ನನ್ನದು ಈ ಕನ್ನಡ ನಾಡು
೯೧. ಹಕ್ಕಿ ಹಾರುತಿದೆ
೯೨. ಹೊಸಗನ್ನಡ ಕ್ಯಾವ್ಯಶ್ರೀ
೯೩. ರವೀಂದ್ರ ಪ್ರಶಸ್ತಿ
೯೪. ಕನಕದಾಸ ಚತುಶ್ಯತಮಾನೋತ್ಸವ ಸಂಸ್ಮರಣ ಸಂಪುಟ
೯೫. ಚಂದ್ರಹಾಸ

## ಸಂಪಾದಿತ ಪತ್ರಿಕೆಗಳು - ೪

೯೬. ವಾಗ್ಭೂಷಣ
೯೭. ಸ್ವಧರ್ಮ
೯೮. ಜಯ ಕರ್ನಾಟಕ
೯೯. ಜೀವನ

## ಅನುವಾದ ಕನ್ನಡಕ್ಕೆ - ೬

೧೦೦. ಉಪನಿಷತ್ ರಹಸ್ಯ ಅಥವಾ ಭಾರತೀಯ ಅಧ್ಯಾತ್ಮ ಶಾಸ್ತ್ರ
ಪೀಠಿಕೆ - ರಂ. ರಾ. ದಿವಾಕರ ಹಾಗೂ ಶಂ. ಬಾ. ಜೋಶಿ
೧೦೧. ಭಾರತೀಯ ನವಜನ್ಮ
೧೦೨. ಗುರು ಗೋವಿಂದಸಿಂಗ
೧೦೩. ಕಬೀರ ವಚನಾವಲಿ
೧೦೪. ಭಗ್ನ ಮೂರ್ತಿ
೧೦೫. ನೂರೊಂದು ಕವನಗಳು

## ಮರಾಠಿಯಲ್ಲಿ - ೬

೧೦೬. ಸಂವಾದ
೧೦೭. ವಿಠಲ ಸಂಪ್ರದಾಯ
೧೦೮. ಶಾಂತಲಾ (ಕಾದಂಬರಿ)
೧೦೯. ಸಂತ ಮಹಂತ ಪೂರ್ಣಶಂಭು ವಿಠಲ (ಪ್ರಬಂಧ)
೧೧೦. ವಿಠ್ಠಲ ಪಾಂಡುರಂಗ (ಕವನ ಸಂಗ್ರಹ)
೧೧೧. ಉಮಾಳಾ (೧೧೩ ಮರಾಠಿ ಕವನಗಳ ಸಂಗ್ರಹ)

## ಇತರ - ೨

೧೧೨. ಮಾತೆಲ್ಲ ಜ್ಯೋತಿ (ಭಾಷಣ ಸಂಗ್ರಹ)

೧೧೩. ಮತ-ಧರ್ಮ ಮತ್ತು ಆಧುನಿಕ ಮಾನವ (ಭಾಷಣಗಳ ಸಂಗ್ರಹ).

## ಇಂಗ್ಲಿಷ ಕೃತಿಗಳು - ೨

114. A Theory of Immortality
115. Language-Mathematics & Truth.

## ಬೇಂದ್ರೆ ಕವನಗಳು ವಿವಿಧ ಭಾಷೆಗಳಲ್ಲಿ ಅನುವಾದ - ೮

116. Dr. D. R. Bendre - Four Strings - ಇಂಗ್ಲಿಷ ಭಾಷೆಯಲ್ಲಿ
117. ಚತುರ್ಮುಖಿ ಸೌಂದರ್ಯ, ಲೀಲೆ, ಕೀರ್ತಿ - ಜರ್ಮನ್ ಭಾಷೆಯಲ್ಲಿ
118. ಚಾರ್ ತಾರ್ - 'ನಾಕು ತಂತಿ'ಯ ಹಿಂದೀ ಅನುವಾದ
119. ಚಾರ ತಂತು - 'ನಾಕು ತಂತಿ'ಯ ಮರಾಠಿ ಅನುವಾದ
120. Spring Fire
121. Dreaming Tomorrow
122. Three one Act Plays
123. Sakheegeet

} Dr. K. Raghavendra Rao
Dr. Vaman Bendre
Dr. K. S. Sharma

---

: ಪುಸ್ತಕಗಳು ದೊರೆಯುವ ಸ್ಥಳ :

"ಶ್ರೀಮಾತಾ ಪ್ರಕಾಶನ", "ವಿಶ್ವಶ್ರಮ ಚೇತನ", ಗೋಕುಲ ರಸ್ತೆ,
ಬಸವೇಶ್ವರ ನಗರ, ಹುಬ್ಬಳ್ಳಿ.

ರವೀಂದ್ರ ಪುಸ್ತಕಾಲಯ,
ಚಾಮರಾಜಪೇಟೆ, ಸಾಗರ - 577 401,
ಶಿವಮೊಗ್ಗ ಜಿಲ್ಲೆ
ದೂರವಾಣಿ : 08183-228616 (ಕ).

# ಹೃದಯ ಸಮುದ್ರ

“ಹೃದಯ ಸಮುದ್ರ” ಕವನಗಳಲ್ಲಿ ಕೆಲವು ಪ್ರಾರ್ಥನಾರೂಪವಾಗಿವೆ, ಕೆಲವು ಅನುಭವವರ್ಣನಾರೂಪ; ಕೆಲವು ಅನುಭವ ಸಹಜನಿತವಾದವುಗಳು; ಕೆಲವು ರಾಷ್ಟ್ರ: ಕೆಲವು ಕನಸು-ನೆನಸು, ಕೆಲವುದ್ಧ್ವನಿಸುವ ಅನುಭಾವವು ವಾಚ್ಯ-ಅನಿರ್ವಾಚ್ಯದ ನಡುಸೀಮೆಗೆ ಸೇರಿದುದು. ಕವಿ ಜೀವನದಲ್ಲಿವಸ್ತುನಿಷ್ಠೆ, ಆತ್ಮನಿಷ್ಠೆಗಳು ಹೃದಯನಿಷ್ಠೆಯಲ್ಲಿ ಒಗೆತನ ಬಾಳನಡೆಸುವವು. ಕಾವ್ಯಾಸ್ವಾದನಕ್ಕೆ ಹೃದಯಾನುಭೂತಿ ಮೂಲಧನ. ಅದರ ಕ್ಷೇತ್ರದ ಹಿಗ್ಗು ಜೀವನದ ಸಾರ.

ಹೃದಯದ ನೂರುಸಾವಿರ ತಂತಿಗಳಲ್ಲಿ ಒಂದಾದರೂ
ಇಲ್ಲಿಯ ವಚೋವಿನ್ಯಾಸದಿಂದ, ಛಂದೋವಿಲಾಸದಿಂದ
ಧ್ವನಿಯ ತಾಂಡವಲಾಸ್ಯಗಳಿಂದ ಕಂಪಿತವಾದರೆ
ಇಲ್ಲಿಯ ವಾಣಿ ಸಾರ್ಥಕ.

-ದ.ರಾ.ಬೇಂದ್ರೆ.



ಡಾ|| ದ.ರಾ.ಬೇಂದ್ರೆ ಸಂಶೋಧನ ಸಂಸ್ಥೆ,
ಹುಬ್ಬಳ್ಳಿ

Design:Ra